ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ಸಾಹಿತ್ಯಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೧೧ ೧೨ ೪-೫
ಸಂಚಿಕೆ : ೦೪-೦೫

(ಖಾಸಗಿ ಪ್ರಸಾರಕ್ಕಾಗಿ ಮಾತ್ರ)

ಅಕ್ಟೋಬರ್ ೨೦೦೭ - ಮಾರ್ಚ್ ೨೦೦೮

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



**ಪರಿವಿಡಿ**



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೪೭೭

ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥
ಮಂಡ್ಯ ಜಿಲ್ಲೆ

# ೭೪ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ–ಉಡುಪಿಯಲ್ಲಿ ಪ್ರೊ.ಎಲ್.ಎಸ್. ಶೇಷಗಿರಿರಾವ್ ಅಧ್ಯಕ್ಷ ಪೀಠದಿಂದ ಗುಡುಗಿದ ಮುಖ್ಯಾಂಶಗಳು



**ಎಚ್ಚರಿಕೆ ಮಾತುಗಳು :**

೧. ಕನ್ನಡಿಗರೇ, ಭಾರತದಲ್ಲಿ ನೀವು ಎರಡನೇ ದರ್ಜೆ ನಾಗರೀಕರಾಗಲು ಯಾವಕಾರಣಕ್ಕೂ ಒಪ್ಪಬೇಡಿ.
೨. ಕನ್ನಡಿಗರಿರುವುದು ಕೇಂದ್ರ ಸರಕಾರಕ್ಕೆ ತೆರಿಗೆಕೊಟ್ಟು ಸೈನ್ಯದಲ್ಲಿ ಬಲಿದಾನಕ್ಕೆ ಸಿದ್ಧರಾಗಿ ಕೇಂದ್ರವು ಅನುಗ್ರಹಿಸಿದ್ದನ್ನು ದೈನ್ಯತೆಯಿಂದ ಸ್ವೀಕರಿಸುವುದಕ್ಕೆ ಅಲ್ಲ.
೩. ಕೇಂದ್ರ ಸರಕಾರದಲ್ಲಿ ೨೭ ಕ್ಯಾಬಿನೆಟ್ ದರ್ಜೆ ಸಚಿವರಿದ್ದಾರೆ. ಆದರೆ ಒಬ್ಬರೂ ಕನ್ನಡಿಗರಿಲ್ಲ. ಇದು ಅತ್ಯಂತ ವಿಷಾದದ ಸಂಗತಿ
೪. ಜಾಗತೀಕರಣ ಎನ್ನುವುದು ನಿಜವಾಗಿ ಅಮೇರಿಕರಣ ವಾಗುತ್ತಿದೆ. ಇದರತ್ತ ಜನತೆ ದನಿಎತ್ತಬೇಕು,ವಿರೋಧಿಸಬೇಕು.
೫. ಕೇಂದ್ರ ಸರಕಾರದ ನ್ಯಾಷನಲ್ ಬುಕ್ ಟ್ರಸ್ಟ್ ಎಲ್ಲಾ ರಾಜ್ಯಗಳ ಕುರಿತು ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಆದರೆ ಕರ್ನಾಟಕ ಕುರಿತು ಪುಸ್ತಕ ಇಲ್ಲ.

**ಸರ್ಕಾರಕ್ಕೆ ಸಲಹೆಗಳು :**

೧. ೧ನೇತರಗತಿಯಿಂದ ಇಂಗ್ಲೀಷ್ ಬೋಧನೆ ಸರಿಯಾದ ಕ್ರಮವಲ್ಲ.
೨. ರಾಜ್ಯದಲ್ಲಿ ಯಾವುದೇ ಉದ್ಯೋಗಕ್ಕೂ ಕನ್ನಡ ತಿಳಿವಳಿಕೆ ಕಡ್ಡಾಯವಾಗಬೇಕು.
೩. ಮಾಹಿತಿ ತಂತ್ರಜ್ಞಾನ ವಲಯದಲ್ಲಿ ಕನ್ನಡಗರಿಗೆ ಮೀಸಲಾತಿ ಅಗತ್ಯವಿದೆ.
೪. ಸರೋಜಿನಿ ಮಹಿಷಿ ವರದಿಯು ಸೂಚಿಸಿರುವಷ್ಟು ಉದ್ಯೋಗವಕಾಶವಾದರೂ ಕನಿಷ್ಠಪಕ್ಷ ಕನ್ನಡಿಗರಿಗೆ ದೊರೆಯಲೇಬೇಕು.
೫. ರಾಜಧಾನಿಯಲ್ಲಿ ಕನ್ನಡ ಪರ ವಾತಾವರಣ ಮೂಡಿಸಲು ಸಮಿತಿ ರಚನೆಯಾಗಬೇಕು.
೬. ಡಾ॥ ನಂಜುಂಡಪ್ಪ ವರದಿ ಕಾರ್ಯಗತ ಗೊಳಿಸಲು ಸರಕಾರ ಮನಸ್ಸುಮಾಡಬೇಕು.
೭. ಕರ್ನಾಟಕದಲ್ಲಿ ಎಲ್ಲಡೆ ಕನ್ನಡಿಗರಿಗೆ ಸೂಕ್ತ ಸ್ಥಾನಮಾನ ದೊರೆಯುವ ವಾತಾವರಣ ಸೃಷ್ಠಿಯಾಗಬೇಕು.
೮. ಶೀಘ್ರವೇ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನವನ್ನು ಕೇಂದ್ರ ಸರ್ಕಾರ ನೀಡುವಂತೆ ಮಾಡಲು ಪ್ರಜಾಪ್ರತಿನಿಧಿಗಳು ಒತ್ತಡ ತರಬೇಕು.
೯. ಮಕ್ಕಳ ಸಾಹಿತ್ಯ ಸಂಸ್ಥೆ ನಿರ್ಮಾಣ ಗೊಳ್ಳಬೇಕು.
೧೦. ರಾಜ್ಯದ ಹಿತರಕ್ಷಣೆಗೆ ಪ್ರಾದೇಶಿಕ ಪಕ್ಷದ ಅಗತ್ಯವಿದೆ. ಮುಂತಾಗಿ ಹಲವು ಸಲಹೆ ಸೂಚನೆಗಳನ್ನು ನೀಡಿದರು.

ಈ ಬಗ್ಗೆ ಕನ್ನಡ ಜನ ಹಾಗೂ ಕರ್ನಾಟಕ ಸರ್ಕಾರ ಕಾರ್ಯಮಗ್ನವಾಗಬೇಕೆಂದು ಒತ್ತಿ ಹೇಳಿದರು.

# ಸಂಪಾದಕೀಯ

೨೦೦೮ನೇ ವರ್ಷಕ್ಕೆ ಎಲ್ಲಾ ಸದಸ್ಯರುಗಳಿಗೂ ಪ್ರತಿಷ್ಠಾನ ಹಾರ್ದಿಕ ಶುಭಾಶಯ ಕೋರುತ್ತದೆ.

ಅತ್ಯಂತ ಕ್ರಿಯಾಶೀಲ, ಪಾದರಸ ಚಟುವಟಿಕೆಗಳ ಪ್ರೊ ಚಿ.ಶ್ರೀನಿವಾಸರಾಜು ಅವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಯಶಸ್ವಿ ಅಧ್ಯಕ್ಷರಾಗಿ ಒಂದು ವರ್ಷ ಪೂರೈಸಿ ಎರಡನೇವರ್ಷದಲ್ಲಿ ಹಲವಾರು ವೈಶಿಷ್ಟ್ಯಪೂರ್ಣ ಯೋಜನೆಗಳನ್ನು ಆಯೋಜಿಸಿ ಪ್ರಪ್ರಥಮವಾಗಿ ದಿನಾಂಕ ೩/೧/೦೮ ರಂದು ಬಿ.ಎಂ.ಶ್ರೀ. ಅವರ ಜನ್ಮದಿನದಂದು ಶ್ರೀ ಉತ್ಸವವನ್ನು ವಿಶಿಷ್ಟರೀತಿಯಲ್ಲಿ ಪುಸ್ತಕಗಳ ಬಿಡುಗಡೆ ಮೂಲಕ ಆಚರಿಸಲು ಎಲ್ಲಾ ಸಿದ್ಧತೆ ಮಾಡಿಕೊಂಡಿದ್ದರು. ಆದರೆ ದುರಾದೃಷ್ಟವಶಾತ್ ಕುಪ್ಪಳ್ಳಿ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಲು ಪ್ರಯಾಣಿಸುತ್ತಿದ್ದಾಗ ಹೃದಯಾಘಾತದಿಂದ ನಿಧನರಾದರು.

ಇದು ಅತ್ಯಂತ ದುಃಖ ದಾಯಕ ಸಂಗತಿ. ಈ ಅನಿರೀಕ್ಷಿತ ಆಘಾತ ದಿಂದ ಪ್ರತಿಷ್ಠಾನ ತತ್ತರಿಸುತ್ತಿದೆ. ಅವರೆಲ್ಲಾ ಯೋಜನೆಗಳನ್ನು ಅವರಿಷ್ಟದಂತೆಯೇ ಕಾರ್ಯಗತಗೊಳಿಸಲು ಪ್ರತಿಷ್ಠಾನ ಬದ್ಧವಾಗಿದೆ. ಎಂದು ಸದಸ್ಯರಲ್ಲಿ ಅರಿಕೆ ಮಾಡಿಕೊಳ್ಳುತ್ತಾ ಅವರೆಲ್ಲಾ ಸ್ಮರಣೀಯ ಕೊಡುಗೆಗಳನ್ನು ಗೌರವಪೂರ್ಣವಾಗಿ ಸ್ಮರಿಸುತ್ತಾ, ಅವರಿಗೆ ತುಂಬು ಹೃದಯದಿಂದ ಗೌರವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ. ಅವರ ದಿವ್ಯ ಆತ್ಮಕ್ಕೆ ಚಿರಶಾಂತಿ ದೊರೆಯಲಿ. ಅವರ ಕುಟುಂಬವರ್ಗದ ಎಲ್ಲಾ ಸದಸ್ಯರಿಗೂ ಈ ದುಃಖವನ್ನು ಸಹಿಸುವ ಶಕ್ತಿಯನ್ನು ಪರಮಾತ್ಮ ಕರುಣಿಸಲಿ ಎಂದು ಪ್ರತಿಷ್ಠಾನ ಆಶಿಸುತ್ತದೆ.

'ವಾರ್ತಾ ಪತ್ರ' ಅವರ ಪ್ರೀತಿಯಕೂಸು. ಇದನ್ನು ಅವರು ಬಹಳ ಆಸ್ಥೆಯಿಂದ ಪ್ರಾರಂಭಿಸಿ. ಪ್ರತಿಷ್ಠಾನಕ್ಕೆ ಕಿಂಚಿತ್ತೂ ಇದರಿಂದ ಆರ್ಥಿಕ ಭಾರ ಆಗದಂತೆ ಯೋಜನೆಯೊಂದನ್ನು ರೂಪಿಸಿದ್ದರು. ೪೮ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಪ್ರೊ.ಎಲ್.ಎಸ್. ಶೇಷಗಿರಿರಾವ್ ಅವರ ಸಂದರ್ಶನ ಲೇಖನದೊಂದಿಗೆ ಪ್ರಕಟಗೊಂಡ ೩ನೇ ವಾರ್ತಾಪತ್ರವನ್ನು ಉಡುಪಿಯಲ್ಲಿಯೇ ಪುಸ್ತಕ ಮಳಿಗೆಯಲ್ಲಿ ಹಲವು ಸಾಹಿತಿ ಮಿತ್ರರ ಸಮ್ಮುಖದಲ್ಲಿ ನನ್ನಿಂದಲೇ ಬಿಡುಗಡೆ ಮಾಡಿಸಿ ಸಂಭ್ರಮಿಸಿದ್ದರು. ತುಂಬು ಅಭಿಮಾನದಿಂದ ಅದನ್ನು ಎಲ್ಲಾ ಪುಸ್ತಕ ಮಳಿಗೆಗಳಿಗೂ ಹಂಚಿಸಲು ಏರ್ಪಾಡು ಸಹಾ ಮಾಡಿದ್ದರು. ಕನ್ನಡ ಪರ ಚಟುವಟಿಕೆಗಳಲ್ಲಿ ಅವರಿಗಿದ್ದ ಕಾಳಜಿ ಹಾಗೂ ನಿಷ್ಠೆಯನ್ನು ಇದು ಪ್ರತಿಪಾದಿಸುತ್ತದೆ. ನನ್ನ ಮತ್ತು ಪ್ರೊ.ಚಿ.ಶ್ರೀ ಅವರ ಸ್ನೇಹ ಬಹಳ ಹಳೆಯದು ೧೯೮೮-೯೨ರವರೆಗೆ ನಾನು ಮತ್ತು ಅವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೋಶಾಧಿಕಾರಿ, ಕಾರ್ಯದರ್ಶಿಯಾಗಿದ್ದೆವು.ಆಗ ಹುಟ್ಟಿದ ಸ್ನೇಹ ದಿನಕಳೆದಂತೆ ಗಾಢವಾಗತೊಡಗಿತ್ತು. ಅತ್ಯಂತ ಆತ್ಮೀಯವಾಗಿತ್ತು. ಇಂತಹ ಸಹೃದಯ ಮಿತ್ರನನ್ನು ಕಳೆದುಕೊಂಡು ನನಗೆ ಅತೀವ ದುಃಖವಾಗಿದೆ. ಇವರಿಗೆ ನಾನೂ ವೈಯಕ್ತಿಕವಾಗಿ ಆತ್ಮೀಯ ಹಾಗೂ ಗೌರವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

ಮುದ್ರಣಾಲಯದಲ್ಲಿ ಆದ ಅನಿರೀಕ್ಷಿತ ತೊಂದರೆಯಿಂದಾಗಿ ಈ ಸಾರಿ ಸಂಚಿಕೆ ೪ ಮತ್ತು ೫ ಎರಡನ್ನು ಒಟ್ಟಿಗೇ ಪ್ರಕಟಿಸುತ್ತಿದ್ದೇವೆ. ವಾರ್ತಾಪತ್ರ ಪ್ರಕಟಣೆ ತಡವಾದುದಕ್ಕೆ ವಿಷಾದಿಸುತ್ತೇವೆ.

* * *

ಪ್ರತಿಷ್ಠಾನಾ ಕಾರ್ಯ ಚಟುವಟಿಕೆಗಳು ಯಾವುದೇ ಕಾರಣಕ್ಕೂ ನಿಲ್ಲಬಾರದು. ಅಬಾಧಿತವಾಗಿ ನಡೆದುಕೊಂಡು ಹೋಗುವುದು ಅನಿವಾರ್ಯ ಎಂಬುದನ್ನು ಮನಗಂಡು ೨/೧/೨೦೦೮ರಂದು ಕರೆದಿದ್ದ ತುರ್ತು ಕಾರ್ಯಕಾರಿ ಸಮಿತಿಯು ಸರ್ವಾನುಮತದಿಂದ ಕನ್ನಡ ಸಾಹಿತ್ಯ ಕ್ಷೇತ್ರದ ವಿದ್ವಾಂಸ, ಬಹುಮುಖ ಪ್ರತಿಭೆಯ ಸಾಹಿತಿ ಹಾಗೂ ಕಾರ್ಯಕಾರಿ ಸಮಿತಿಯ ಸದಸ್ಯ ಡಾ.ಪಿ.ವಿ.ನಾರಾಯಣ ಅವರನ್ನು ನೂತನ ಅಧ್ಯಕ್ಷರಾಗಿ ಆಯ್ಕೆಮಾಡಿತು. ಡಾ. ಪಿ.ವಿ.ನಾ ಅವರು ಪ್ರತಿಷ್ಠಾನದ ಮೇಲಿನ ಪ್ರೀತಿಯಿಂದ ಸಮಿತಿಯ ಸಲಹೆಗೆ ಒಪ್ಪಿಗೆ ನೀಡಿ, ದಿನಾಂಕ ೩/೧/೦೮ ರಂದು ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡರು. ಇವರನ್ನು ಪ್ರತಿಷ್ಠಾನ ಗೌರವಯುತವಾಗಿ ಸ್ವಾಗತಿಸುತ್ತದೆ, ಅಭಿನಂದಿಸುತ್ತದೆ. ಇವರೆಲ್ಲಾ ಕಾರ್ಯಚಟುವಟಿಕೆಗಳಿಗೂ ಯಶಸ್ವಿಯಾಗಲಿ ಎಂದು ಸಭೆ ಕೋರುತ್ತದೆ.

ಎಸ್.ವಿ. ಶ್ರೀನಿವಾಸರಾವ್

## ಪ್ರತಿಷ್ಠಾನದ ನೂತನ ಅಧ್ಯಕ್ಷರು



ಏಪ್ರಿಲ್ ತರಗತಿಗಳ ಸಮಾರೋಪ ಮತ್ತು ನೂತನ ಅಧ್ಯಕ್ಷರಿಗೆ ಅಭಿನಂದನಾ ಸಮಾರಂಭ

**ವೆಂಕಪ್ಪಯ್ಯ ನರಸಮ್ಮ ಅವರ ಸುಪುತ್ರ; ಶ್ರೀ ಪಿ.ವಿ. ನಾರಾಯಣ** ಅವರು ಜನಿಸಿದ್ದು ದಿನಾಂಕ ೧೯-೧೨-೧೯೪೨ರಂದು ತುಮಕೂರು ಜಿಲ್ಲೆ ಅಕ್ಕಿರಾಂಪುರದಲ್ಲಿ. ಉನ್ನತ ದರ್ಜೆಯಲ್ಲಿ ಎಂ.ಎ. ಪದವಿಯನ್ನು ಪಡೆದು ಉಪನ್ಯಾಸಕರಾಗಿ ಸೇರಿ 'ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನದ ಮೇಲೆ ಮಹಾಪ್ರಬಂಧ ರಚಿಸಿ ಪಿ.ಎಚ್.ಡಿ. ಪಡೆದಿದ್ದಾರೆ.

ಸಾಹಿತ್ಯಕ್ಷೇತ್ರದಲ್ಲಿ ಕಥೆ, ಕಾದಂಬರಿ ರಚನಕಾರರಾಗಿ, ವಿಮರ್ಶಕರಾಗಿ, ಗ್ರಂಥ ಸಂಪಾದಕರಾಗಿ, ಸಂಕಲನಕಾರರಾಗಿ ಖ್ಯಾತರಾಗಿರುವುದಲ್ಲದೆ ಚಿಂತನಶೀಲರಾಗಿ, ಎಲ್ಲಾ ರಾಜ್ಯಪರ, ಜನಪರ, ಚಳವಳಿಗಳಲ್ಲೂ ಮುಂಚೂಣಿಯಲ್ಲಿರುವುದನ್ನು ಕಾಣುತ್ತೇವೆ.

ಇವರ ಪ್ರಮುಖ ಸಾಹಿತ್ಯ ಕೊಡುಗೆಗಳು: 'ಸಮಾಜದ ಮೇಲೆ ವಿಜ್ಞಾನದ ಪ್ರಭಾವ', 'ಧರ್ಮಕಾರಣ' ಈ ಕೃತಿಗಳು ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗೆ ಭಾಜನವಾಗಿವೆ. ಕುಮುದೆಂಡು ರಾಮಾಯಣ (ಸಂಪಾದನೆ) ಬಸವಪುರಾಣ ಸಂಗ್ರಹ (ಸಂಗ್ರಹ) ಅರಿಸ್ಟೋಫಿನೀಸನ ಎರಡು ನಾಟಕಗಳು; ಪದ್ಮಿನಿ ಪರಿಣಯ: ಸಾಮಾನ್ಯ ವಿಕಾಸ, ಮದುವೆ ಮತ್ತು ನೀತಿ, ಹಳಗನ್ನಡ ಪದಸಂಪರ ಮುಂತಾದವು.

* * *

# ಪ್ರತಿಷ್ಠಾನದ ವಾರ್ತೆ

## ಕಾರ್ಯಕ್ರಮಗಳು

### ಹಳಗನ್ನಡ ಕಾವ್ಯಭ್ಯಾಸ ಶಿಬಿರ




ತಾ॥ ೬-೧೦-೨೦೦೭ ರಂದು ನಡೆದ 'ಹಳಗನ್ನಡ ಕಾವ್ಯಾಭ್ಯಾಸ ಶಿಬಿರ'

೧೩-೧೦-೦೭ ಏಪ್ರಿಲ್: ತರಗತಿಗಳ ಉದ್ಘಾಟನೆ ಮತ್ತು ವಿಶೇಷ ಉಪನ್ಯಾಸ ಕಾರ್ಯಕ್ರಮ. ಡಾ. ಕೆ.ವಿ. ನಾರಾಯಣ ಅವರು ವಿಶೇಷ ಉಪನ್ಯಾಸ ನೀಡಿದರು. ಶ್ರೀ ಚಿ. ಶ್ರೀನಿವಾಸರಾಜು ಅಧ್ಯಕ್ಷತೆ ವಹಿಸಿದ್ದರು.

'ಪ್ರಬಂಧ ಮಂಡನೆ' ಕಾರ್ಯಕ್ರಮ ಅಡಿಯಲ್ಲಿ ಶ್ರೀಮತಿ ವಿ. ಲಕ್ಷ್ಮೀ ಅವರು 'ನಾಗಾರಾಧನೆಯ ಮೇಲೆ ಯಕ್ಷಾರಾಧನೆ ಮತ್ತು ನಾಥಸಂಪ್ರದಾಯದ ಪ್ರಭಾವ' ಪ್ರಬಂಧ ಮಂಡಿಸಿದರು. ಶ್ರೀ ರಮೇಶ್ ಎಚ್.ವಿ. ಅವರು 'ರಾಮಾಯಣದ ಕಥಾಂತರ – ಶ್ರೀ ವೀರಪ್ಪ ಮೊಯಿಲಿಯವರ ಶ್ರೀರಾಮಾಯಣ ಮಹಾನ್ವೇಷಣಂ ಕೃತಿಯನ್ನು ಅನುಲಕ್ಷಿಸಿ 'ಪ್ರಬಂಧ ಮಂಡಿಸಿದರು.

**೧೬.೧೨.೦೭ ಬೆಳಿಗ್ಗೆ ೧೦.೩೦ ಗಂಟೆಗೆ:** 'ಜಿ.ಪಿ. ರಾಜರತ್ನಂ ಸಂಸ್ಮರಣೆ' ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ' ನುಡಿ ಬಳಗ' ಸಹ ಭಾಗಿತ್ವದಲ್ಲಿ ಈ ಕಾರ್ಯಕ್ರಮವು ನಡೆಯಿತು. ಪ್ರೊ. ಜಿ. ಅಶ್ವತ್ಥನಾರಾಯಣ ಅವರು 'ರಾಜರತ್ನಂ ಮತ್ತು ನಾನು' ಸವಿನೆನಪುಗಳನ್ನು ಮೆಲುಕು ಹಾಕಿದರು. ಶ್ರೀ ವೈ.ವಿ. ಗುಂಡೂರಾವ್ (ಹಾಸ್ಯ ಸಾಹಿತಿ) 'ಯೆಂಡ ಯೆಂಡ್ತಿ ಕನ್ನಡ ಪದ್ಗೊಳ್' ಕುರಿತು ಮಾತನಾಡಿದರು. ಸಂಚಾಲಕ ಎನ್. ರಾಮನಾಥ್‌ರವರು ಕಾರ್ಯಕ್ರಮ ನಿರೂಪಿಸಿದರು. ಪ್ರೊ. ನಾ. ಗೀತಾಚಾರ್ಯ ವಂದಿಸಿದರು.

**೨೮.೧೨.೦೭ ಶುಕ್ರವಾರ ಸಂಜೆ ೫.೦೦ ತರಗತಿಗೆ ರಜೆ–ಮೌನಾಚರಣೆ**

ಪ್ರತಿಷ್ಠಾನದ ಅಧ್ಯಕ್ಷರೂ ನಾಡಿನ ಪ್ರಸಿದ್ಧ ಲೇಖಕರೂ ಆಗಿದ್ದ ಪ್ರೊ. ಚಿ. ಶ್ರೀನಿವಾಸರಾಜು ಅವರು ಕುವೆಂಪು ಜನ್ಮದಿನದ ಕಾರ್ಯಕ್ರಮಕ್ಕಾಗಿ ಕುಪ್ಪಳ್ಳಿಗೆ ಹೋಗುವ ಮಾರ್ಗದಲ್ಲಿ ತೀರ್ಥಹಳ್ಳಿಯಲ್ಲಿ ಅಂದು ಬೆಳಗಿನ ಜಾವದಲ್ಲಿ ಅನಿರೀಕ್ಷಿತವಾಗಿ ಹೃದಯಾಘಾತದಿಂದ ಸಾವಿಗೀಡಾದ ಹಿನ್ನೆಲೆಯಲ್ಲಿ ಈ ದಿನದ ಎಂಫಿಲ್ ತರಗತಿಯನ್ನು ರದ್ದುಮಾಡಲಾಯಿತು.

ಬೆಳಗ್ಗಿನಿಂದಲೇ ಸುದ್ದಿ ತಿಳಿದ ವಿದ್ಯಾರ್ಥಿಗಳು ಅಧ್ಯಕ್ಷರ ಮನೆಯ ಬಳಿಯೇ ಸೇರತೊಡಗಿದ್ದರು. ಪಾರ್ಥಿವ ಶರೀರ ಸಂಜೆ ವೇಳೆಗೆ ಬರುವ ನಿರೀಕ್ಷೆ ಇದ್ದು, ಪ್ರತಿಷ್ಠಾನದಲ್ಲಿದ್ದ ವಿದ್ಯಾರ್ಥಿಗಳನ್ನು ಸೇರಿಸಿ ಚಿ. ಶ್ರೀನಿವಾಸರಾಜು ಅವರಿಗೆ ಭಾವಪೂರ್ಣ ಶ್ರದ್ಧಾಂಜಲಿಯನ್ನು ಸಲ್ಲಿಸಲಾಯಿತು.

ಅಧ್ಯಾಪಕರಾದ ಡಾ. ಕೆ.ಪಿ. ಭಟ್, ಪ್ರೊ. ಜಿ. ಅಶ್ವತ್ಥನಾರಾಯಣ, ಪ್ರೊ. ಡಿ. ಲಿಂಗಯ್ಯ ಮತ್ತು ಕಾರ್ಯ ಸಮಿತಿ ಸದಸ್ಯರಾದ ಪ್ರೊ. ನ. ಸುಬ್ರಹ್ಮಣ್ಯ ಮತ್ತು ಪ್ರೊ. ನಾ. ಗೀತಾಚಾರ್ಯ ಭಾಗವಹಿಸಿದ್ದರು. ನಂತರ ದಿವಂಗತರ ಆತ್ಮಕ್ಕೆ ಶಾಂತಿಯನ್ನು ಕೋರಿ ಒಂದು ನಿಮಿಷದ ಮೌನವನ್ನು ಆಚರಿಸಲಾಯಿತು.

**೩೧.೧೨.೦೭ ಸಂಜೆ ೬.೦೦ ಗಂಟೆಗೆ:** 'ಸಿರಿ ಸಂಗೀತ ಮತ್ತು ಶ್ರೀವೈಷ್ಣವ ಕೀರ್ತನ ಸೌರಭ' (ಶ್ರೀ ವೈಷ್ಣವ ಹರಿದಾಸರ ಕೀರ್ತನೆಗಳ ಪ್ರಾತ್ಯಕ್ಷಿಕ ಪರಿಚಯ)

**ಮಹಿಳಾ ಹರಿದಾಸರ ಬಗ್ಗೆ ಕನ್ನಡ ಸಾಹಿತ್ಯ ಅಲಕ್ಷ**

"ಕನ್ನಡ ಸಾಹಿತ್ಯದಲ್ಲಿ ಹರಿದಾಸ ಸಾಹಿತ್ಯ ಜೀವಂತ ಸಾಹಿತ್ಯವಾಗಿ ಪ್ರವಹಿಸುತ್ತಿದೆ. ಇದಕ್ಕೆ ಮಹಿಳಾ ಹರಿದಾಸರ ಸೇವೆಯೂ ಮುಖ್ಯವಾಗಿದೆ. ಹೀಗಿದ್ದರೂ ಕನ್ನಡ ಸಾಹಿತ್ಯ ಮಹಿಳಾ ಹರಿದಾಸರ ಬಗ್ಗೆ ಅಷ್ಟಾಗಿ ಚರ್ಚಿಸಿಲ್ಲ. ಅವರ ಕೊಡುಗೆಯನ್ನು ಅಲಕ್ಷ ಮಾಡಿದೆ" ಎಂದು ಕನ್ನಡ ನಿವೃತ್ತ ಪ್ರಾಧ್ಯಾಪಕಿ ಪ್ರೊ. ಎಂ.ಆರ್. ಲಕ್ಷ್ಮೀದೇವಿ ಅಭಿಪ್ರಾಯಪಟ್ಟಿದ್ದಾರೆ.

ನಗರದ ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಾರಾಯಣ ಶರ್ಮ ಸಂಸ್ಕೃತಿ ಕೇಂದ್ರ ನಡೆಸಿದ ಶ್ರೀ ವೈಷ್ಣವ ಕೀರ್ತನ ಸೌರಭ ಕಾರ್ಯಕ್ರಮದಲ್ಲಿ ಮಾತನಾಡುತ್ತಾ ಈ ಕಾರ್ಯಕ್ರಮವೇ ಮಹಿಳಾ ಹರಿದಾಸರನ್ನೇ ಪ್ರತ್ಯೇಕವಾಗಿ ಚಿಂತಿಸುವ ಮೊಟ್ಟ ಮೊದಲ ಕಾರ್ಯಕ್ರಮವಾಗಿದೆ ಎಂದು ಶ್ಲಾಘಿಸಿದರು.

ಗೀತಾಚಾರ್ಯರು ಹರಿದಾಸ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ಪರಂಪರೆಯನ್ನು ಶೋಧಿಸಿರುವುದು ಅವರನ್ನು ಕುರಿತು ಒಂದೊಂದು ಸ್ವತಂತ್ರ ಕಾರ್ಯಕ್ರಮವನ್ನು ಇಡೀ ವರ್ಷ ನಡೆಸಿರುವುದನ್ನು ಮಹಿಳಾ ಹರಿದಾಸರ ಕೊಡುಗೆ ಬಗೆಗೇ ಒಂದು ಪ್ರತ್ಯೇಕ ಕಾರ್ಯಕ್ರಮ ರೂಪಿಸಿರುವುದು ಅಭಿನಂದನೀಯ ಎಂದು ಮೆಚ್ಚುಗೆ ಸೂಚಿಸಿದರು.

ಶ್ರೀ ವೈಷ್ಣವ ಪರಂಪರೆಯಲ್ಲಿ ತಿರುಮಲಾಂಬ ಮತ್ತು ಯದುಗಿರಿಯಮ್ಮ ಅವರ ಕೊಡುಗೆ ಅನನ್ಯ ಎಂದು ಹೇಳುತ್ತಾ ನಮಗೆಲ್ಲಾ ಮೊದಲ ಆಧುನಿಕ ಲೇಖಕಿಯಾಗಷ್ಟೇ ಪರಿಚಿತರಾಗಿದ್ದ ತಿರುಮಲಾಂಬ ಅವರನ್ನು ಗೀತಾಚಾರ್ಯರು ಮಹಿಳಾ ಹರಿದಾಸರನ್ನಾಗಿಯೂ ತೋರಿಸಿಕೊಟ್ಟಿದ್ದಾರೆ ಎಂದು ಹೇಳಿದರು.

ನಂತರ ಇವರಿಬ್ಬರ ಕೀರ್ತನೆಗಳನ್ನು ಸಂಗೀತ ವಿದುಷಿ ಶ್ರೀಲಕ್ಷ್ಮೀ ಶ್ರೀನಿವಾಸನ್ ಅವರು ಸುಶ್ರಾವ್ಯವಾಗಿ ಹಾಡಿ ಅವರ ಕೀರ್ತನೆಗಳ ಮಾಧುರ್ಯವನ್ನು ಪರಿಚಯಿಸಿದರು. ಇವರಿಗೆ ಸಾಥಿಯಾಗಿ ನಾಗರಾಜ್, ಮೃದಂಗ ವಾದಕರಾಗಿ, ರಾಘವೇಂದ್ರ ಅವರು ಪಿಟೀಲು ವಾದಕರಾಗಿ ಸಭೆಯನ್ನು ರಂಜಿಸಿದರು.

ಪ್ರೊ. ನಾ. ಗೀತಾಚಾರ್ಯ ಸ್ವಾಗತ ಮತ್ತು ಪ್ರಸ್ತಾವನೆಯನ್ನು ಮಾಡಿದರು. ರಮಾದೇವಿ ವಿಶ್ವೇಶ್ವಯ್ಯ ವಂದಿಸಿದರು.

ಬಿ.ಎಂ.ಶ್ರೀ ಅವರ ಜನ್ಮ ದಿನದಂದು ಬಿ.ಎಂ.ಶ್ರೀ ಪ್ರತಿಷ್ಠಾನ ಪ್ರತಿವರ್ಷದಂತೆ ಈ ವರ್ಷ "ಶ್ರೀ ಉತ್ಸವ" ಹೆಸರಿನಲ್ಲಿ ವಿಶೇಷ ಕಾರ್ಯಕ್ರಮವನ್ನು ನಡೆಸಿತು. ಬಿ.ಎಂ.ಶ್ರೀ ಅವರ ಅಪ್ರಕಟಿತ ಬರಹಗಳ ಸಂಕಲನ 'ಶ್ರೀ ಸಾಹಿತ್ಯ ಮಣಿಮಾಲೆ' ಪುಸ್ತಕ ಈ ಕಾರ್ಯಕ್ರಮಕ್ಕಾಗಿಯೇ ನಡೆಸಿದ್ದ ಇಂಗ್ಲೀಷ್ ಕವಿತೆಗಳ ಅನುವಾದ ಕವನ ಸ್ಪರ್ಧೆಯ ವಿಜೇತರ ಕವಿತಾ ಸಂಕಲನ 'ಕನ್ನಡದ ಕನ್ನಡಿಯಲ್ಲಿ' ಪುಸ್ತಕ ಬಿಡುಗಡೆ ಹಾಗೂ ಶ್ರೀಮತಿ ಸುಕನ್ಯಾ ವಿಜಯಕುಮಾರ ತಂಡದಿಂದ ಶ್ರೀಗೀತೆಗಳ ಗಾಯನ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಬಿ.ಎಂ.ಶ್ರೀ ಅವರ ಪ್ರಾರ್ಥನೆ, ವಸಂತ ಬಂದ ಮುಂತಾದ ಗೀತೆಗಳನ್ನು ಕನ್ನಡ ಅಧ್ಯಾಪಕಿ ಹಾಗೂ ಸಂಗೀತ ಕಲಾವಿದೆ ಸುಕನ್ಯಾ ವಿಜಯಕುಮಾರ್ ವೀಣೆಯೊಂದಿಗೆ ಭಾರತೀಯ ಸಂಗೀತ ಶೈಲಿಯಲ್ಲಿ ಸುಶ್ರಾವ್ಯವಾಗಿ ಹಾಡಿ ರಂಜಿಸಿದರು.

ಆರಂಭದಲ್ಲಿ ಗೌರವ ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ ಅವರು 'ಈ ಕಾರ್ಯಕ್ರಮ' ಈಚೆಗೆ ಅಗಲಿದ ಕನ್ನಡ ಪರಿಚಾರಕ ಸಾಹಿತಿ ಮತ್ತು ಪ್ರತಿಷ್ಠಾನದ ಅಧ್ಯಕ್ಷರಾಗಿದ್ದ ಪ್ರೊ. ಚಿ. ಶ್ರೀನಿವಾಸರಾಜು ಅವರ ಕನಸಿನ ಕೂಸಾಗಿತ್ತೆಂದೂ ಸ್ಮರಿಸಿದರು.

ಹಿರಿಯ ಸಾಹಿತಿಗಳೂ ಸಂಗೀತ ವಿಮರ್ಶಾ ತಜ್ಞರೂ ಆದ ಡಾ. ಕೆ. ಶ್ರೀಕಂಠಯ್ಯನವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಕಣಕಟ್ಟೆ ಕೃಷ್ಣಮೂರ್ತಿರಾವ್ ಸ್ಮಾರಕ ದತ್ತಿನಿಧಿಯ ಪ್ರಾಯೋಜನೆಯ ಈ ಕಾರ್ಯಕ್ರಮವನ್ನು ರೂಪಿಸಲಾಗಿತ್ತೆಂದೂ ಹೇಳುತ್ತಾ, ದಾನಿಗಳಿಗೆ ಕೃತಜ್ಞತೆಗಳನ್ನರ್ಪಿಸಿದರು. 'ಸಿರಿಸಂಗೀತ' ಸಂಚಾಲಕಿ ರಮಾದೇವಿ ವಿಶ್ವೇಶ್ವರಯ್ಯ ವಂದನೆ ಸಲ್ಲಿಸಿದರು.

**೨.೧.೨೦೦೮ ಬುಧವಾರ ಸಂಜೆ ೬.೦೦ ಗಂಟೆ**

'ದಿ. ಪ್ರೊ. ಚಿ. ಶ್ರೀನಿವಾಸರಾಜು ಅವರಿಗೆ ಶ್ರದ್ಧಾಂಜಲಿ ಸಭೆ' ಭಾಗವಹಿಸಿದ್ದವರು: ಪ್ರೊ. ಎಲ್.ಎಸ್. ಶೇಷಗಿರಿರಾವ್, ಪ್ರೊ. ಎಂ.ಎಚ್. ಕೃಷ್ಣಯ್ಯ, ಡಾ. ಪಿ.ವಿ. ನಾರಾಯಣ, ಶ್ರೀ ಎಸ್. ಸುಗತ, ಶ್ರೀ ಡಿ.ವಿ. ಪ್ರಹ್ಲಾದ್, ಪ್ರೊ. ಗೀತಾಚಾರ್ಯ, ಶ್ರೀ ಎಸ್.ವಿ. ಶ್ರೀನಿವಾಸರಾವ್. ಸನ್ಮಾನ್ಯ ಜಿ. ನಾರಾಯಣ, ಅಧ್ಯಕ್ಷತೆ ವಹಿಸಿದರು. ಸಭೆ ಪ್ರೊ. ಜಿ. ಶ್ರೀನಿವಾಸರಾಜು ಅವರ ಅಮೂಲ್ಯ ಕನ್ನಡ ಸೇವೆಯನ್ನು ಸ್ಮರಿಸಿ, ಸ್ತುತಿಸಿ ಗೌರವಪೂರ್ವ ಶ್ರದ್ಧಾಂಜಲಿಯನ್ನು ಅರ್ಪಿಸಿತು.



೩.೧.೨೦೦೮ : 'ಶ್ರೀಉತ್ಸವ' ಬಿ.ಎಂ.ಶ್ರೀ ಅವರ ೧೧೪ನೇ ಹುಟ್ಟುಹಬ್ಬ. ಬಿ.ಎಂ.ಶ್ರೀ ಪ್ರತಿಮೆಗೆ ಮಾಲಾರ್ಪಣೆ, ಗ್ರಂಥ ಬಿಡುಗಡೆ, ಸಿರಿ ಸಂಗೀತ ಕಾರ್ಯಕ್ರಮಗಳು ನಡೆದವು.

ಪ್ರೊ. ಎಲ್.ಎಸ್. ಶೇಷಗಿರಿರಾವ್ ಕಾರ್ಯಕ್ರಮದ ಉದ್ಘಾಟನೆ ನೆರವೇರಿಸಿದರು. ಡಾ. ಪ್ರಧಾನ ಗುರುದತ್ 'ಶ್ರೀ ಸಾಹಿತ್ಯ ಮಣಿಮಾಲೆ (ಬಿ.ಎಂ.ಶ್ರೀ.ಯವರ ಅಪ್ರಕಟಿತ ಬರಹಗಳ ಸಂಕಲನ-ಸಂಪಾದಕ ಡಾ. ಟಿ.ಪಿ. ವೆಂಕಟಾಚಲಶಾಸ್ತ್ರಿ) ಗ್ರಂಥ ಬಿಡುಗಡೆ ಮಾಡಿದರು. ನಾಡೋಜ ಜಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಸುಕನ್ಯಾ ಉದಯಕುಮಾರ್ ಮತ್ತು ತಂಡದವರಿಂದ 'ಸಿರಿ ಸಂಗೀತ' ಕಾರ್ಯಕ್ರಮ ನಡೆಯಿತು. ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಗಳು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

**೨೦.೧.೨೦೦೮ ಏಪ್ರಿಲ್**: ತರಗತಿಗಳ ಸಮಾರೋಪ ಮತ್ತು ನೂತನ ಅಧ್ಯಕ್ಷರಿಗೆ ಅಭಿನಂದನಾ ಸಮಾರಂಭ. ಡಾ. ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಎಂ.ಎಚ್. ಕೃಷ್ಣಯ್ಯ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

**೨೬.೧.೨೦೦೮ನೇ ಶನಿವಾರ ಸಂಜೆ ೫.೩೦ಕ್ಕೆ**: ಪ್ರಥಮ ಎಂಫಿಲ್ ಪದವಿ ಪತ್ರ ಪ್ರಧಾನ ಸಮಾರಂಭ ಬೆಂಗಳೂರು ವಿಶ್ವವಿದ್ಯಾಲಯದಿಂದ ಡಿ.ಲಿಟ್ ಪ್ರಶಸ್ತಿ ಪುರಸ್ಕೃತ ಶ್ರೀ ಜಿ. ನಾರಾಯಣ ಅವರಿಗೆ ಅಭಿನಂದನೆ ಕಾರ್ಯಕ್ರಮ.

ಪ್ರಸಿದ್ಧ ವಿದ್ವಾಂಸ ಡಾ. ಶ್ರೀನಿವಾಸ ಹಾವನೂರು ಪದವಿ ಪತ್ರಗಳನ್ನು ಪ್ರದಾನ ಮಾಡಿದರು. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ನಿರ್ದೇಶಕ ಅಧ್ಯಯನಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ನಾಡೋಜ ಜಿ. ನಾರಾಯಣ ಅವರಿಗೆ ಅಧ್ಯಕ್ಷರು ಶಾಲು ಹೊದಿಸಿ, ಪುಷ್ಪಮಾಲೆ ಹಾಕಿ ಗೌರವ 'ಡಿ ಲಿಟ್'ಗಾಗಿ ಅಭಿನಂದಿಸಿದರು. ವ್ಯವಸ್ಥಾಪಕ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅತಿಥಿಗಳನ್ನು ಸ್ವಾಗತಿಸಿದರು. ಪ್ರೊ. ಗೀತಾಚಾರ್ಯ ಪ್ರಸ್ತಾವಿಕ ಭಾಷಣ ಮಾಡಿದರು.

### ೧೨.೩.೨೦೦೮ ಎಂ.ವಿ.ಸೀ. ಸಂಸ್ಮರಣೆ ಮತ್ತು ಎಂ.ವಿ.ಸೀ. ಪುರಸ್ಕಾರ ಪ್ರಧಾನ ಸಮಾರಂಭ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ ಅವರು ಉದ್ಘಾಟನೆ ಮಾಡಿದರು. ಮುಖ್ಯ ಅತಿಥಿ ಡಾ. ಸಾ.ಶಿ. ಮರುಳಯ್ಯ ಅವರು, ಖ್ಯಾತ ಸಂಶೋಧಕ ಶ್ರೀ ಎಸ್. ಶಿವಣ್ಣ ಅವರ ಅನಾರೋಗ್ಯ ನಿಮಿತ್ತ ಪ್ರಶಸ್ತಿ ಸ್ವೀಕರಿಸಲು ಆಗಮಿಸದೆ ಇದ್ದುದರಿಂದ ಅವರ ಸ್ವಗೃಹಕ್ಕೆ ಪ್ರತಿಷ್ಠಾನದ ಪದಾಧಿಕಾರಿಗಳ ಜೊತೆಯಲ್ಲಿ ಹೋಗಿ ಸನ್ಮಾನಿಸಿದರು. ಡಾ. ಪಿ.ವಿ. ನಾರಾಯಣ ಅವರು, ಪ್ರೊ. ಗೀತಾಚಾರ್ಯ ಸಂಪಾದಿಸಿರುವ ಕೃತಿ. 'ವೆಂಕಟದಾಸರು ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು' ಲೋಕಾರ್ಪಣೆ ಗೊಳಿಸಿದರು. ಡಾ. ಜಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಸ್.ವಿ. ಶ್ರೀನಿವಾಸರಾವ್ ಸ್ವಾಗತಿಸಿದರು. ಪ್ರೊ. ಗೀತಾಚಾರ್ಯ ಪ್ರಸ್ತಾವಿಕ ನುಡಿಗಳನ್ನು ನುಡಿದರು.

## ಕನ್ನಡಿಗರಿಗೆ ಎಲ್ಲಾ ಕ್ಷೇತ್ರಗಳಲ್ಲಿ ಅನ್ಯಾಯ

**ಪ್ರವಾ. ೧೩.೩.೨೦೦೮, ಬೆಂಗಳೂರು**: ಸಹಸ್ರಾರು ವರ್ಷಗಳ ಇತಿಹಾಸ ಇರುವ ಕನ್ನಡ ಭಾಷೆ ಮತ್ತು ಕನ್ನಡಿಗರಿಗೆ ಪ್ರತಿ ಕ್ಷೇತ್ರದಲ್ಲೂ ಅನ್ಯಾಯವಾಗುತ್ತಿದೆ. ಇದನ್ನು ನೋಡಿದರೆ ಕನ್ನಡಿಗರಲ್ಲಿ ಹೋರಾಟದ ಮನೋಭಾವ ಕಡಿಮೆಯಾದಂತೆ ಕಾಣುತ್ತಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕ ಶ್ರೀ ಮನು ಬಳಿಗಾರ್ ಇಲ್ಲಿ ಕಳವಳ ವ್ಯಕ್ತಪಡಿಸಿದರು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬಿ.ಎಂ.ಶ್ರೀ ಕಲಾಭವನದ ಎಂ.ವಿ.ಸೀ. ಸಭಾಂಗಣದಲ್ಲಿ ಬುಧವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಮಾತನಾಡಿದರು.

ಭಾಷೆ ಮತ್ತು ಸಂಸ್ಕೃತಿ ವಿಷಯದ ಸಂರಕ್ಷಣೆಗೆ ಇಳಿ ವಯಸ್ಸಿನಲ್ಲೂ ಹೋರಾಡಬೇಕಾದಂತಹ ಪರಿಸ್ಥಿತಿ ನಾಡಿನ ಹಿರಿಯ ಚೇತನಗಳಿಗೆ ಬಂದಿದೆ ಎಂದರು.

ಕರ್ನಾಟಕ ಜಾನಪದ ಪರಿಷತ್ ಅಧ್ಯಕ್ಷ ಜಿ.ನಾರಾಯಣ ಮಾತನಾಡಿ, ಕನ್ನಡಿಗ[illegible] ನಿರಾಸೆ ಮತ್ತು ನಿರುತ್ಸಾಹ ಪ್ರವೃತ್ತಿ ಬೆಳೆಯುತ್ತಿದೆ ಎಂದು ಆತಂಕ ವ್ಯಕ್ತಪಡಿಸಿದರು.

ಕಾರ್ಯಕ್ರಮದಲ್ಲಿ 'ವೆಂಕಟದಾಸರು ಮತ್ತು ಇತರ ಅದ್ವೈತ ಹರಿದಾಸ ಕೀರ್ತನೆಗಳು' ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಪ್ರತಿಷ್ಠಾನದ ಕಾರ್ಯದರ್ಶಿಗಳಾದ ಪ್ರೊ. ನಾ.ಗೀತಾಚಾರ್ಯ, ಎಸ್.ವಿ.ಶ್ರೀನಿವಾಸರಾವ್, ಖಜಾಂಚಿ ಎಸ್.ಟಿ.ರಾಧಾಕೃಷ್ಣ, ಡಾ. ಪಿ.ವಿ.ನಾರಾಯಣ ಮೊದಲಾದವರು ಉಪಸ್ಥಿತರಿದ್ದರು.

೨೯.೩.೨೦೦೮ನೇ ಶನಿವಾರ : ಡಿ.ವಿ.ಜಿ. ದತ್ತಿ ಉಪನ್ಯಾಸ ಕಾರ್ಯಕ್ರಮ: (ದಾನಿಗಳು: ದಿ॥ ಡಾ.ಎಸ್.ಕೆ. ಲಕ್ಷ್ಮಣರಾವ್) ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ ಅವರು ಡಿ.ವಿ.ಜಿ. ಅವರ ಕಾವ್ಯ ಕುರಿತು ವಿದ್ವತ್‌ಪೂರ್ಣ ವಿಶ್ಲೇಷಣೆ ನಡೆಸಿದರು. ಸ್ವಾತಂತ್ರ್ಯ ಹೋರಾಟಗಾರ ಹಾಗೂ ಪತ್ರಕರ್ತರಾದ ಶ್ರೀ ಹೆಚ್.ಎಸ್. ದೊರೆಸ್ವಾಮಿ ಅವರು ಹಾಗೂ ನಾಡೋಜ ಜಿ.ನಾರಾಯಣ ಅವರುಗಳು ತಮ್ಮ ಮತ್ತು ಡಿ.ವಿ.ಜಿ. ಅವರೊಡನಿದ್ದ ವೈಯಕ್ತಿಕ ಸಂಬಂಧ ಕುರಿತು ಮಾತನಾಡಿದರು. ಶ್ರೀಮತಿ ಸುಕನ್ಯಾರವರು 'ಮಂಕುತಿಮ್ಮನ ಕಗ್ಗ'ದ ಕೆಲವು ಕವನಗಳನ್ನು ಸುಶ್ರಾವ್ಯವಾಗಿ ಹಾಡಿದರು. ಪ್ರೊ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಎಸ್.ವಿ. ಶ್ರೀನಿವಾಸರಾವ್ ವಂದನಾರ್ಪಣೆ ಮಾಡಿದರು.

---

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕ್ರಮಗಳ ಬಗ್ಗೆ ಪತ್ರಿಕಾವರದಿ




## ಸಿರಿಸಂಗೀತದಲ್ಲಿ "ಶ್ರೀ ಗೀತೆಗಳು"

ಜನವರಿ ೩, ಬಿ.ಎಂ.ಶ್ರೀ ಅವರ ಜನ್ಮದಿನ. ಈ ದಿನ ಬಿ.ಎಂ.ಶ್ರೀ ಪ್ರತಿಷ್ಠಾನ ಪ್ರತಿವರ್ಷ ವಿಶೇಷ ಕಾರ್ಯಕ್ರಮವನ್ನು ರೂಪಿಸುತ್ತದೆ. ಬೆಂಗಳೂರು ಮತ್ತು ಬೆಳ್ಳೂರುಗಳಲ್ಲಿ "ಶ್ರೀ" ಸ್ಮಾರಕ ಭವನಗಳನ್ನು ನಿರ್ಮಿಸಿ ಮಾದರಿಯಾಗಿದೆ. ಈ ಎರಡೂ ಕಡೆ ಬಿ.ಎಂ.ಶ್ರೀ. ಪ್ರತಿಮೆಗಳಿಗೆ ಮಾಲಾರ್ಪಣೆ ಮತ್ತು ಇತರ ಸಾಹಿತ್ಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದೆ.

ಈ ವರ್ಷ "ಶ್ರೀಉತ್ಸವ" ಹೆಸರಿನಲ್ಲಿ ವಿಶೇಷ ಕಾರ್ಯಕ್ರಮವನ್ನು ನಡೆಸಿತು. ಅದರ ಅಂಗವಾಗಿ ನಗರದ ನ್ಯಾಷನಲ್ ಕಾಲೇಜು ವೃತ್ತದಲ್ಲಿರುವ ಮತ್ತು ಶ್ರೀ ಭವನದಲ್ಲಿರುವ ಬಿ.ಎಂ.ಶ್ರೀ. ಪ್ರತಿಮೆಗಳಿಗೆ ಮಾಲಾರ್ಪಣೆ.

ಬಿ.ಎಂ.ಶ್ರೀ ಅವರ ಅಪ್ರಕಟಿತ ಬರಹಗಳ ಸಂಕಲನ "ಶ್ರೀ ಸಾಹಿತ್ಯ ಮಣಿಮಾಲೆ" ಪುಸ್ತಕ ಈ ಕಾರ್ಯಕ್ರಮಕ್ಕಾಗಿಯೇ ನಡೆಸಿದ್ದ ಇಂಗ್ಲೀಷ್ ಕವಿತೆಗಳ ಅನುವಾದ ಕವನ ಸ್ಪರ್ಧೆಯ ವಿಜೇತರ ಕವಿತಾ ಸಂಕಲನ "ಕನ್ನಡದ ಕನ್ನಡಿಯಲ್ಲಿ" ಪುಸ್ತಕ ಬಿಡುಗಡೆ ಹಾಗೂ ಸುಕನ್ಯಾ ವಿಜಯಕುಮಾರ ತಂಡದಿಂದ ಶ್ರೀಗೀತೆಗಳ ಗಾಯನ ಕಾರ್ಯಕ್ರಮಗಳನ್ನು ನಡೆಸಲಾಯಿತು. ಬಿ.ಎಂ.ಶ್ರೀ. ಅವರ ಪ್ರಾರ್ಥನೆ, ವಸಂತ ಬಂದ ಮುಂತಾದ ಗೀತೆಗಳನ್ನು ಕನ್ನಡ ಅಧ್ಯಾಪಕಿ ಹಾಗೂ ಸಂಗೀತ ಕಲಾವಿದೆ ಸುಕನ್ಯಾ ವಿಜಯಕುಮಾರ್ ಸುಶ್ರಾವ್ಯವಾಗಿ ಹಾಡಿದರು. ಕನ್ನಡ ಗೀತೆಗಳನ್ನು ವೀಣೆಯೊಂದಿಗೆ ಭಾರತೀಯ ಸಂಗೀತ ಶೈಲಿಯಲ್ಲಿ ಹಾಡಿ ರಂಜಿಸಿದರು.

ಜೊತೆಗೆ ಶಾಲಾಮಕ್ಕಳಿಗೆ ಮತ್ತು ವಿದೇಶಿ ಕನ್ನಡಗರಿಗೆ ಶ್ರೀ ಗೀತೆಗಳ ಸ್ವಾರಸ್ಯವನ್ನು ತಿಳಿಸಲು ಇಂಗ್ಲೀಷ್ ಗೀತೆಗಳ ಮೂಲ ಇಂಗ್ಲೀಷ್ ಕವಿತೆಗಳಿಗೂ ಪಾಶ್ಚಾತ್ಯ ಸಂಗೀತ ಶೈಲಿಯಲ್ಲಿಯೇ ರಾಗ ಸಂಯೋಜಿಸಿರುವುದಾಗಿಯೂ ತಿಳಿಸುತ್ತಾ ಪ್ರಯೋಗಕ್ಕಾಗಿ ಒಂದು ಇಂಗ್ಲೀಷ್ ಗೀತೆಯನ್ನು ಗಿಟಾರ್ ವಾದನದೊಂದಿಗೆ ಹಾಡಿ ತೋರಿಸಿದರು.

ಆರಂಭದಲ್ಲಿ ಗೌರವ ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ ಅವರು ಈ ಕಾರ್ಯಕ್ರಮ ಈಚೆಗೆ ಅಗಲಿತ ಕನ್ನಡ ಪರಿಚಾರಕ ಸಾಹಿತಿ ಮತ್ತು ಪ್ರತಿಷ್ಠಾನದ ಅಧ್ಯಕ್ಷರಾಗಿದ್ದ ಪ್ರೊ. ಚಿ. ಶ್ರೀನಿವಾಸರಾಜು ಅವರ ಕನಸಿನ ಕೂಸಾಗಿತ್ತೆಂದೂ ಸ್ಮರಿಸಿದರು.

ಹಿರಿಯ ಸಾಹಿತಿಗಳೂ ಸಂಗೀತ ವಿಮರ್ಶಾತಜ್ಞರೂ ಆದ ಡಾ. ಕೆ. ಶ್ರೀಕಂಠಯ್ಯನವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಕಣಕಟ್ಟೆ ಕೃಷ್ಣಮೂರ್ತಿರಾವ್ ಸ್ಮಾರಕ ದತ್ತಿನಿಧಿಯ ಪ್ರಾಯೋಜನೆಯಡಿ ಈ ಕಾರ್ಯಕ್ರಮವನ್ನು ಅದರಲ್ಲೂ ವಿಶೇಷವಾಗಿ ಸಿರಿಸಂಗೀತ ಕಾರ್ಯಕ್ರಮವನ್ನು ರೂಪಿಸಲಾಗಿತ್ತೆಂದೂ ಹೇಳುತ್ತಾ ದಾನಿಗಳಿಗೆ ಕೃತಜ್ಞತೆಗಳನ್ನರ್ಪಿಸಿದರು.

"ಸಿರಿಸಂಗೀತ"ದ ಸಂಚಾಲಕಿ ರಮಾದೇವಿ ವಿಶ್ವೇಶ್ವರಯ್ಯ ವಂದನೆ ಸಲ್ಲಿಸಿದರು.

–ರಾಜ್ಯಪ್ರಗತಿ

# 'ಏಕೀಕರಣ: ಸಾಹಿತಿಗಳ ಉದ್ದೇಶ ಫಲಿಸಿಲ್ಲ'

ಕರ್ನಾಟಕ ಪ್ರಾಂತ ರಚನೆಯಾಗಬೇಕೆಂಬ ಪರಿಕಲ್ಪನೆ ಮೊದಲು ಹುಟ್ಟಿಕೊಂಡಿದ್ದು ಸಾಹಿತಿಗಳಲ್ಲಿ ಎಂದು ಕರ್ನಾಟಕ ಜಾನಪದ ಪರಿಷತ್ತಿನ ಅಧ್ಯಕ್ಷ ಜಿ. ನಾರಾಯಣ ಪ್ರತಿಪಾದಿಸಿದರು.

ಬಿ.ಎಂ.ಶ್ರೀಯವರ ೧೧೪ನೆಯ ಹುಟ್ಟುಹಬ್ಬದ ಪ್ರಯುಕ್ತ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಏರ್ಪಡಿಸಿದ್ದ ಶ್ರೀ ಉತ್ಸವ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ೫೦ ವರ್ಷಗಳ ಹಿಂದೆ ಕರ್ನಾಟಕ ಏಕೀಕರಣ ನಾಡಿನ ಹಿರಿಯ ಸಾಹಿತಿಗಳ ಪರಿಶ್ರಮದಿಂದ ಸಾಧ್ಯವಾಯಿತೇ ವಿನಃ




ಬಿ.ಎಂ.ಶ್ರೀಯವರ ೧೧೪ನೆಯ ಹುಟ್ಟುಹಬ್ಬದ ಅಂಗವಾಗಿ ಬೆಂಗಳೂರಿನ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಗುರುವಾರ ಏರ್ಪಡಿಸಿದ್ದ ಶ್ರೀ ಉತ್ಸವ ಕಾರ್ಯಕ್ರಮದಲ್ಲಿ ಬಿ.ಎಂ.ಶ್ರೀ. ಅಪ್ರಕಟಿತ ಬರಹಗಳ ಸಂಕಲನವನ್ನು ಅನುವಾದ ಅಕಾಡೆಮಿ ಅಧ್ಯಕ್ಷ ಡಾ. ಪ್ರಧಾನ ಗುರುದತ್ ಬಿಡುಗಡೆಗೊಳಿಸಿದರು. ಈ ಸಂದರ್ಭದಲ್ಲಿ ಪ್ರತಿಷ್ಠಾನದ ಗೌರವಾಧ್ಯಕ್ಷ ಜಿ.ನಾರಾಯಣ, ಸಾಹಿತಿ ಪ್ರೊ. ಎಲ್.ಎಸ್. ಶೇಷಗಿರಿರಾವ್, ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ, ಡಾ. ಪಿ.ವಿ.ನಾರಾಯಣ ಉಪಸ್ಥಿತರಿದ್ದರು.

ರಾಜಕಾರಣಿಗಳಿಂದಲ್ಲ. ಏಕೀಕರಣ ಕುರಿತಂತೆ ಸಾಹಿತಿಗಳು ಅಂದು ಇಟ್ಟುಕೊಂಡಿದ್ದ ಗುರಿ, ಉದ್ದೇಶಗಳು ಇಂದಿಗೂ ಈಡೇರಿಲ್ಲ ಎಂದು ವಿಷಾದಿಸಿದರು. ಕರ್ನಾಟಕ ಏಕೀಕರಣಗೊಂಡು ೫೦ ವರ್ಷಗಳು ಕಳೆದರೂ ಇಂದಿಗೂ ಕನ್ನಡವನ್ನು ಉಳಿಸಿ, ಬೆಳೆಸುವುದು ಕಷ್ಟವಾಗುತ್ತಿದೆ. ನೆರೆರಾಜ್ಯದ ಭಾಷೆಗೆ ಶಾಸ್ತ್ರೀಯ ಭಾಷೆ ಸ್ಥಾನಮಾನ ಲಭಿಸಿದರೂ ಕನ್ನಡಕ್ಕೆ ಆ ಭಾಗ್ಯ ಇನ್ನೂ ಬಾರದಿರುವುದು ದುರಂತ ಎಂದರು.

ಕನ್ನಡ ಭಾಷೆಯನ್ನು ಉಳಿಸಿ-ಬೆಳೆಸುವ ಕಾರ್ಯಕ್ರಮ ಜೊತೆಜೊತೆಗೆ ಸಾಗಬೇಕು. ಈ ನಿಟ್ಟಿನಲ್ಲಿ ಕನ್ನಡ ಪರ ಸಂಘ-ಸಂಸ್ಥೆಗಳು, ಕಾರ್ಯಕರ್ತರು ಸರ್ಕಾರಕ್ಕೆ ನಿರಂತರ ಸಲಹೆ, ಸೂಚನೆಗಳನ್ನು ನೀಡುತ್ತಿರಬೇಕು ಎಂದು ಒತ್ತಾಯಿಸಿದರು. ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಸಾಹಿತಿ ಪ್ರೊ. ಎಲ್.ಎಸ್. ಶೇಷಗಿರಿರಾವ್, ಸಾಮಾನ್ಯ ಮನುಷ್ಯನ ಮನೋಧರ್ಮಗಳನ್ನು ಕನ್ನಡ ಸಾಹಿತ್ಯಕ್ಕೆ ತಂದುಕೊಟ್ಟವರು ಬಿ.ಎಂ.ಶ್ರೀಯವರು ಕನ್ನಡ ಭಾಷೆ, ಛಂದಸ್ಸು, ವ್ಯಾಕರಣ, ಕಾವ್ಯಗಳಲ್ಲಿ ಹೊಸ ಪ್ರಯೋಗಗಳನ್ನು ಮಾಡುವುದರ ಜೊತೆಗೆ ಸಾಮಾನ್ಯ ಮನುಷ್ಯನ ನೋವು, ನಲಿವು, ಪ್ರಾರ್ಥನೆಗಳನ್ನು ಬರವಣಿಗೆಯಲ್ಲಿ ಮೂಡಿಸಿದ್ದರು. ಇದಕ್ಕೆ ಇಂಗ್ಲಿಷಿನಿಂದ ಅವರು ಅನುವಾದಿಸಿದ ಕರುಣಾಳು ಬಾ ಬೆಳಕೆ, ಎಲ್ಲಿ ಮನಕೆ ಅಳುಕಿರದೋ ಅಲ್ಲಿ ತಲೆ ಬಾಗಿರದೋ ಕವನಗಳು ನಿದರ್ಶನ ಎಂದರು.

ಕನ್ನಡ ನಾಟಕಕ್ಕೆ ದುರಂತಗಳ ಪರಿಕಲ್ಪನೆಯನ್ನು ತಂದುಕೊಟ್ಟವರು ಸಹ ಬಿ.ಎಂ.ಶ್ರೀಯವರು. ಇತರ ಭಾಷೆಗಳನ್ನು ತುಲನಾತ್ಮಕ ದೃಷ್ಟಿಯಿಂದ ಅಧ್ಯಯನ ಮಾಡಿ ಕನ್ನಡ ಭಾಷೆ ಬೆಳೆಸುವಂತೆ ಕನ್ನಡ ಸಾಹಿತ್ಯಪ್ರೇಮಿಗಳಿಗೆ ಕರೆ ನೀಡಿದರು.

ಹರಿದು ಹಂಚಿಹೋಗಿದ್ದ ಕನ್ನಡ ನಾಡನ್ನು ಒಂದುಗೂಡಿಸುವ ಹಾಗೂ ಅದರ ಏಳಿಗೆಯನ್ನು ಸಾಧಿಸುವ ಹಂಬಲದಿಂದ ಅವಿರತ ಶ್ರಮಿಸಿದ ಬಿ.ಎಂ.ಶ್ರೀಯವರು ಕನ್ನಡ ನಾಡಿನ ಅಮೂಲ್ಯ ಸಾಹಿತ್ಯ ರತ್ನ ಎಂದು ಬಣ್ಣಿಸಿದರು. ಬಿ.ಎಂ.ಶ್ರೀಯವರ ಅಪ್ರಕಟಿತ ಬರಹಗಳ ಸಂಕಲನವಾದ 'ಶ್ರೀ ಸಾಹಿತ್ಯ ಮಣಿಮಾಲೆ' ಹಾಗೂ ಅವರ ಅನುವಾದ ಕವನ ಸಂಕಲವನ್ನು ಬಿಡುಗಡೆ ಗೊಳಿಸಿ ಮಾತನಾಡಿದ ಕರ್ನಾಟಕ ಅನುವಾದ ಅಕಾಡೆಮಿಯ ಅಧ್ಯಕ್ಷ ಡಾ. ಪ್ರಧಾನ ಗುರುದತ್, ಬಿ.ಎಂ.ಶ್ರೀಯವರು ಬೇರೆ ಭಾಷೆಗಳಿಂದ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತರ್ಜುಮೆ ಮಾಡುವ ಮೂಲಕ ಕನ್ನಡ ಸಾಹಿತ್ಯವನ್ನು ವಿಶ್ವಸಾಹಿತ್ಯ ಮಟ್ಟದಲ್ಲಿ ಗುರುತಿಸುವಂತೆ ಮಾಡಿದರು. ಅವರು ಹಾಕಿಕೊಟ್ಟ ಅನುವಾದ ಪರಂಪರೆಯನ್ನು ಇಂದಿನ ಯುವ ಪೀಳಿಗೆ ಮುಂದುವರಿಸಬೇಕು ಎಂದು ಹೇಳಿದರು.

*ಸಂಯುಕ್ತ ಕರ್ನಾಟಕ, ೪.೧.೦೮*

## ಪತ್ರ

ಪ್ರಿಯ ಮಿತ್ರರಾದ ಪ್ರೊ. ನಾ. ಗೀತಾಚಾರ್ಯ ಅವರಿಗೆ,
ವಂದನೆಗಳು,

೨೦೦೭ರ ಜುಲೈ-ಸೆಪ್ಟೆಂಬರ್ ಅವಧಿಯ 'ಪ್ರತಿಷ್ಠಾನದ ವಾರ್ತಾಪತ್ರ' ತಲುಪಿದೆ. ಪ್ರತಿಷ್ಠಾನಕ್ಕೆ ಶ್ರದ್ಧಾಸಕ್ತಿಗಳಿಂದ ದುಡಿದ ಪ್ರೊ. ಚಿ. ಶ್ರೀನಿವಾಸರಾಜು ಇನ್ನಿಲ್ಲದಂತಾದುದು ವಿಷಾದದ ಸಂಗತಿಯೇ ಸರಿ. ಅವರ ಆತ್ಮಕ್ಕೆ ಚಿರಶಾಂತಿ ದೊರೆಯಲಿ ಎಂದು ನಾನೂ ನಿಮ್ಮೊಂದಿಗೆ ದನಿಗೂಡಿಸುತ್ತೇನೆ.

ಇನ್ನು ಪ್ರತಿಷ್ಠಾನದ ನೂತನ ಅಧ್ಯಕ್ಷರಾಗಿ ಡಾ. ಪಿ.ವಿ. ನಾರಾಯಣ ಅವರು ಬಂದಿರುವುದು ನಿಜಕ್ಕೂ ಸಂತೋಷದ ಸಂಗತಿ. ಉತ್ಸಾಹಿಗಳಾದ ಅವರು ಪ್ರತಿಷ್ಠಾನವನ್ನು ಮುನ್ನಡೆಸುವಲ್ಲಿ ತಮ್ಮೊಂದಿಗೆ ಕೈಗೂಡಿಸಿ ನಡೆಯುತ್ತಾರೆಂಬ ಭರವಸೆ ನನಗಿದೆ. ಅವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ದಯವಿಟ್ಟು ತಿಳಿಸಬೇಕಾಗಿ ನನ್ನ ವಿನಂತಿ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
ಡಾ. ಬಿ. ರಾಜಶೇಖರಪ್ಪ

# ಎಂ.ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

### ಎಂ.ಫಿಲ್ ೨೦೦೬-೦೭ನೇ ಸಾಲಿನ ಫಲಿತಾಂಶ

| ಕ್ರ.ಸಂ. | ವಿದ್ಯಾರ್ಥಿ ಹೆಸರು | ಅಂಕಗಳು ೫೦೦ಕ್ಕೆ | ನಿಬಂಧದ ವಿಷಯ | ಮಾರ್ಗದರ್ಶಕರು |
|---|---|---|---|---|
| ೧ | ಹೆಚ್.ವಿ.ಚಂದ್ರಶೇಖರ ಆರಾಧ್ಯ | ೩೩೧ | ನವೋದಯದ ನಂತರದ ಆರು ನಾಟಕಗಳ ಸ್ವರೂಪ-ಸಂರಚನೆ | ಡಾ. ಕೆ.ಆರ್. ಗಣೇಶ್ |
| ೨ | ರವಿಕುಮಾರ್ | ೩೨೧ | ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು | ಡಾ. ಕೆ.ವಿ. ಶ್ರೀನಿವಾಸಮೂರ್ತಿ |
| ೩ | ಜಿ. ವಿಶಾಲಾಕ್ಷಮ್ಮ | ೩೨೦ | ಗಿರೀಶ್ ಕಾರ್ನಾಡರ ನಾಲ್ಕು ನಾಟಕಗಳಲ್ಲಿ ಸಂಸ್ಕೃತಿಗಳ ಮುಖಾಮುಖಿ ಒಂದು ಅಧ್ಯಯನ | ಪ್ರೊ. ಟಿ. ಶ್ರೀನಿವಾಸರಾಜು |
| ೪ | ಪಿ. ಸತೀಶ್ | ೩೭೩ | ಸಿ. ಹನುಮೇಗೌಡರ ಚುಂಚಾದ್ರಿ ಚಂದ್ರಿಕೆ ಮಹಾಕಾವ್ಯ ಒಂದು ಅಧ್ಯಯನ | ಡಾ. ಕೆ.ಎಲ್. ಗೋಪಾಲಕೃಷ್ಣಯ್ಯ |
| ೫ | ಕೆ.ಎಂ. ಸುರೇಶ | ೩೦೦ | ಶ್ರೀಕಂಠೇಶಗೌಡರ ನಾಟಕಗಳು ಒಂದು ಅಧ್ಯಯನ | ಪ್ರೊ. ಜಿ. ಅಶ್ವತ್ಥನಾರಾಯಣ |
| ೬ | ಎಲ್.ರೂಪ ಪ್ರಿಯದರ್ಶಿನಿ | | ಬೇಂದ್ರೆ ಕಾವ್ಯದಲ್ಲಿ ಮಾತೃತ್ವದ ಸ್ವರೂಪ: ಒಂದು ಅಧ್ಯಯನ | ಡಾ. ಕೆ.ಪಿ. ಭಟ್ |
| ೭ | ಸುಜಾತ ಎಸ್. | ೩೪೫ | ಡಾ. ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆ | ಪ್ರೊ. ಹೆಚ್.ವಿ.ಶ್ರೀನಿವಾಸ ಶರ್ಮ |
| ೮ | ಟಿ. ಪ್ರತಿಮಾ | ೩೫೭ | ಯು.ಆರ್. ಅನಂತಮೂರ್ತಿಯವರ ಕಾದಂಬರಿಗಳಲ್ಲಿ ಬಂಡಾಯದ ಹೆಜ್ಜೆ | ಪ್ರೊ. ಹೆಚ್.ಎಸ್. ಹರಿಶಂಕರ್ |
| ೯ | ಮಹಾದೇವಮ್ಮ ಎಸ್. | ೩೩೯ | ಸಿದ್ದಲಿಂಗಯ್ಯನವರ ಸಾಹಿತ್ಯದಲ್ಲಿ ದಲಿತ ಸಂವೇದನೆ : ಒಂದು ಅಧ್ಯಯನ | ಡಾ. ವಿಜಯಾ ಸುಬ್ಬರಾವ್ |
| ೧೦ | ಬಿ.ಆರ್. ಜಯಕುಮಾರಿ | ೩೩೩ | ಸಾರಾ ಅಬೂಬಕ್ಕರ್ ಅವರ ಕಥಾ ಸಾಹಿತ್ಯದಲ್ಲಿ ಮಹಿಳೆ | ಪ್ರೊ. ಹೆಚ್.ಎಸ್. ಹರಿಶಂಕರ್ |
| ೧೧ | ರವೀಂದ್ರ ನಾಗಪ್ಪ ಬೋಳೆಗಾಂವ | ೩೩೨ | ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿ ಸೂಚಿಗಳು | ಪ್ರೊ. ಜಿ. ಅಶ್ವತ್ಥನಾರಾಯಣ |
| ೧೨ | ಗಾಯತ್ರಿ ಎಸ್.ಜಿ. | ೩೪೯ | ಸ್ತ್ರೀವಾದದ ಹಿನ್ನೆಲೆಯಲ್ಲಿ ಪ್ರತಿಭಾನಂದ ಕುಮಾರ್ ಕಾವ್ಯದ ಅಧ್ಯಯನ | ಡಾ. ಕೆ.ಪಿ. ಭಟ್ |
| ೧೩ | ನಾಗಣ್ಣ | ೩೬೧ | ಲಂಕೇಶರ ನೀಲು ಕವಿತೆಗಳಲ್ಲಿ ಪ್ರೇಮದ ಆಖ್ಯಾನ | ಪ್ರೊ. ಟಿ. ಶ್ರೀನಿವಾಸರಾಜು |
| ೧೪ | ಕೆ.ಆರ್. ಮಂಜುಳ | ೩೪೮ | ವೈದೇಹಿಯವರ ಕಥೆಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಧ್ಯಯನ | ಡಾ. ಕೆ.ಆರ್. ಗಣೇಶ್ |

ಎಲ್ಲ ವಿದ್ಯಾರ್ಥಿಗಳೂ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದ್ದಾರೆ. ನಮ್ಮ ಕೇಂದ್ರದಿಂದ ಸತೀಶ್ ಪಿ. ಅತಿ ಹೆಚ್ಚಿನ ಅಂಕ ಗಳಿಸಿ ಶೇ. ೭೪%ರಷ್ಟು ಫಲಿತಾಂಶ ಗಳಿಸಿದ್ದಾರೆ.

**ಗೀತಾಚಾರ್ಯ**
ಗೌ|| ಕಾರ್ಯದರ್ಶಿ ಮತ್ತು ನಿರ್ದೇಶಕರು
ಎಂ.ವಿ.ಸೀ. ಸ್ನಾತಕೋತ್ತರ ಕೇಂದ್ರ

# ಅಭಿನಂದನೆಗಳು

- **ಬಸವಪುರಸ್ಕಾರ :** ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಪ್ರಶಸ್ತಿ 'ಬಸವ ಪುರಸ್ಕಾರ ೨೦೦೬' ಈ ಸಾರಿ ಭಾರತದ ಮಾಜಿ ರಾಷ್ಟ್ರಪತಿ, ಭಾರತರತ್ನ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರಿಗೆ ಸಂದಿದೆ.
- **'ಬಸವಶ್ರೀ ಪ್ರಶಸ್ತಿ' :** ಚಿತ್ರದುರ್ಗದಮುರುಗೇಂದ್ರ ಮಠದ ಶರಣ ಸಂಸ್ಕೃತಿ ಸಾಹಿತ್ಯ ಉತ್ಸವದಲ್ಲಿ ಈ ಪ್ರಶಸ್ತಿಯನ್ನು ಸರ್ವಧರ್ಮ ಸಂಸ್ಥಾಪಕ ಸ್ವಾಮಿ ಅಗ್ನಿದೇವ್ ಅವರಿಗೆ ನೀಡಿ ಗೌರವಿಸಿದೆ. (೨೨/೧೦/೦೭)
- **ವರ್ಧಮಾನ ಪ್ರಶಸ್ತಿ :** ೨೦೦೬ನೇ ಸಾಲಿನ ವರ್ಧಮಾನ ಪ್ರಶಸ್ತಿ ಡಾ.ನಾ.ಡಿಸೋಜಾ ಅವರ 'ಇಗರ್ಜಿಯರ ಸುತ್ತಲಿನ ಹತ್ತು ಮನೆಗಳು' ಕಾದಂಬರಿಗೆ, ಉದಯೋನ್ಮುಖಸಾಹಿತ್ಯಪ್ರಶಸ್ತಿ ಅಗ್ರಹಾರ ಕೃಷ್ಣಮೂರ್ತಿ ಅವರ 'ನೀರು ಮತ್ತು ಪ್ರೀತಿ' ಕಾದಂಬರಿಗೆ ಸಂದಿವೆ.
- **ರಾಜ್ಯೋತ್ಸವ ಪ್ರಶಸ್ತಿ :** ೨೦೦೭ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರ ನೀಡಿದ ೫೧ ಪ್ರತಿಷ್ಠಿತರಲ್ಲಿ ಡಾ. ಮ.ನ ಜವರಯ್ಯ, ಪ್ರೊ. ಚಿ. ಶ್ರೀನಿವಾಸರಾಜು ಸುಮಿತ್ರಾ ಗಾಂಧಿ ಕುಲಕರ್ಣಿ; ಡಾ.ಸಿ.ಎನ್. ರಾಮಚಂದ್ರನ್, ಸರಜೂ ಕಾಟ್ಕರ್ ಸೇರಿದ್ದಾರೆ.
- **ಕಾವ್ಯಾನಂದ ಪ್ರಶಸ್ತಿ :** ಡಾ. ನರಹಳ್ಳಿ ಬಾಲಸುಬ್ರಮಣ್ಯ ಅವರ 'ನೆಲ ಸಂಸ್ಕೃತಿ' ವಿಮರ್ಶಾ ಗ್ರಂಥಕ್ಕೆ (೨೦೦೬) ಲಭಿಸಿದೆ.
- **ಕನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ :** ೨೦೦೭ನೇ ಸಾಲಿನ ಈ ಗೌರವ ಪ್ರಶಸ್ತಿ ಶ್ರೀ ವಸಂತ ಕುಷ್ಟಗಿ; ಶ್ರೀಬಿ.ಎಲ್. ವೇಣು; ಮುಳ್ಳೂರು ನಾಗರಾಜ್, ಡಾ.ಕೆ.ವಿ.ನಾರಾಯಣ್; ಶ್ರೀಮತಿ ಹೇಮಾ ಪಟ್ಟಣ ಶೆಟ್ಟಿ ಅವರಿಗೆ ಲಭಿಸಿವೆ.
- **ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ :** ಶ್ರೀಕುಂ. ವೀರಭದ್ರಪ್ಪ ಅವರ 'ಅರಮನೆ' ಕಾದಂಬರಿಗೆ ೨೦೦೭ನೇ ಸಾಲಿನ ಪ್ರಶಸ್ತಿ ಲಭಿಸಿದೆ.
- **ವಿಶ್ವಮಾನವ ಪ್ರಶಸ್ತಿ :** '(೨೦೦೭) ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಮತ್ತು ದೇ.ಜ.ಗೌ.ಟ್ರಸ್ಟ್ ಸಂಯುಕ್ತವಾಗಿ ನೀಡುವ ವಿಶ್ವಮಾನವ ಪ್ರಶಸ್ತಿ' ವಿಮರ್ಶಕ ಡಾ. ನರಹಳ್ಳಿಬಾಲಸುಬ್ರಮಣ್ಯ ಮತ್ತು ಪತ್ರಿಕೋದ್ಯಮಿ ರಾಜಶೇಖರ ಕೋಟಿ ಅವರಿಗೆ ಲಭಿಸಿವೆ.
- **ಸಾವಿತ್ರಮ್ಮ ದೇ.ಜ.ಗೌ. ಪ್ರಶಸ್ತಿ :** (೨೦೦೭) ಡಾ. ವಿಜಯಲಕ್ಷ್ಮಿ ಬಾಳೇ ಕುದ್ರಿ ಅವರಿಗೆ ಲಭಿಸಿದೆ.
- **ಕರ್ನಾಟಕ ಶ್ರೇಷ್ಠ ಮಾಧ್ಯಮ ಪ್ರಶಸ್ತಿ :** ಎಸ್ಸೆಲ್ ಗ್ರೂಫ್ ಹಾಗೂ 'ಜಿ' ಕನ್ನಡ ಟಿ.ವಿ. ಜಂಟಿಯಾಗಿ ನೀಡುವ ಈ ಪ್ರಶಸ್ತಿ ಪತ್ರಕರ್ತೆ ಡಾ. ಆರ್. ಪೂರ್ಣಿಮಾ ಅವರಿಗೆ; 'ಜೀವಮಾನದ ಸಾಧನೆ ಪ್ರಶಸ್ತಿ' ಶ್ರೀ ಎಂ.ಬಿ.ಸಿಂಗ್ ಮತ್ತು ಹವ್ಯಾಸಿ ಛಾಯಾಗ್ರಾಹಕ ಶ್ರೀ ಟಿ.ಎನ್. ಸತ್ಯನ್ ಅವರಿಗೆ ಲಭಿಸಿದೆ.
- **ಡಾ.ಚನ್ನಬಸವ ಪಟ್ಟದೇವರ ಅನುಭವ ಮಂಟಪ ಪ್ರಶಸ್ತಿ :** ಹಿರಿಯ ಪತ್ರಕರ್ತ ಹಾಗೂ ಸಾಹಿತಿಯಾದ ಶ್ರೀ ರಂಜಾನ್‌ದರ್ಗಾ ಅವರಿಗೆ ನೀಡಿ ಪುರಸ್ಕರಿಸಿದೆ (೧೬-೧೧-೦೭).
- **ಗೌರವ ಡಾಕ್ಟರೇಟ್:** ಬೆಂಗಳೂರು ವಿಶ್ವವಿದ್ಯಾಲಯ ತನ್ನ ೪೬ನೇ ಘಟಿಕೋತ್ಸವದಲ್ಲಿ (೧೬.೨.೨೦೦೮) ಮಾಜಿ ಮುಖ್ಯಮಂತ್ರಿ, ಕವಿ ವೀರಪ್ಪ ಮೊಯಿಲಿ, ಜಿ. ಶಂಕರ್, ಪ್ರಕಾಶ್ ಪಡುಕೋಣೆ, ಸೆಲ್ವದಾಸ್, ಸಾರಾ ಅಬೂಬಕ್ಕರ್‌ರವರಿಗೆ ನೀಡಿ ಗೌರವಿಸಿದೆ.
- **ಗೌರವ ಡಾಕ್ಟರೇಟ್:** ೨೪.೨.೦೮. ಕುವೆಂಪು ವಿಶ್ವವಿದ್ಯಾಲಯದ ತನ್ನ ೧೮ನೇ ಘಟಿಕೋತ್ಸವದಲ್ಲಿ ಬೆಳಗೆರೆ ಕೃಷ್ಣಶಾಸ್ತ್ರಿ, ಶಾಮನೂರು [illegible]ಕರಪ್ಪ ಪ್ರೊ. ಬರಗೂರು ರಾಮಚಂದ್ರಪ್ಪ, ಶಿವಮೊಗ್ಗ ಸುಬ್ಬಣ್ಣ ಅವರಿಗೆ ಗೌರವ ಡಾಕ್ಟರೇಟ್ ನೀಡಿ ಪುರಸ್ಕರಿಸಿದೆ.
- **ಕುಲಪತಿ:** (೨೪.೨.೦೮) ಡಾ. ಎ.ಮುರಿಗೆಪ್ಪ ಅವರು ಹಂಪಿ, ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಆಯ್ಕೆಗೊಂಡಿದ್ದಾರೆ.
- **ನೃಪತುಂಗ ಸಾಹಿತ್ಯ ಪ್ರಶಸ್ತಿ (೧.೩.೦೮):** ಬೆಂಗಳೂರು ಸಾರಿಗೆ ನಿಗಮ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಜಂಟಿಯಾಗಿ ಆಯೋಜಿಸಿರುವ ಪ್ರಥಮ ನೃಪತುಂಗ ಸಾಹಿತ್ಯ ಪ್ರಶಸ್ತಿಯನ್ನು (೫ ಲಕ್ಷದ ಒಂದು ರೂಪಾಯಿ ನಗದು) ಡಾ. ದೇಜಗೌ ಅವರಿಗೆ ನೀಡಿ ಗೌರವಿಸಿದವು.
- **ಬಿ.ಎಚ್. ಶ್ರೀ ಧರ ಸಾಹಿತ್ಯ ಪ್ರಶಸ್ತಿ (೨೦೦೭):** ಡಾ. ಗಿರಡ್ಡಿ ಗೋವಿಂದರಾಜ ಅವರು ಈ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಏಪ್ರಿಲ್ ೨೪ರಂದು ಪ್ರಶಸ್ತಿ ಪ್ರಧಾನ.
- **ಕುವೆಂಪು ಪ್ರತಿಷ್ಠಾನ:** ೧೪.೩.೦೮ ಡಾ.ಹಂಪ ನಾಗರಾಜಯ್ಯ ಅವರನ್ನು ಮೇಲ್ಕಂಡ ಪ್ರತಿಷ್ಠಾನದ ೩ನೇ ಅಧ್ಯಕ್ಷರನ್ನಾಗಿ ಸರ್ಕಾರ ಆಯ್ಕೆ ಮಾಡಿದೆ.
- **ಚಾಮುಂಡರಾಯ ಪ್ರಶಸ್ತಿ (೨೦೦೭) :** ಮೂಡಬಿದರೆಯ ಬಿ. ದೇವಕುಮಾರ ಶಾಸ್ತ್ರಿಗಳಿಗೆ ಸಂದಿದೆ. (ಕ.ಸಾ.ಪ. ಪ್ರಕಟಣೆ)
- **ಬಿ. ಸರೋಜಾದೇವಿ ಸಾಹಿತ್ಯ ಪ್ರಶಸ್ತಿ:** ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯ ಹಿರಿಯ ಲೇಖಕಿ ವಿಶಾಲಾಕ್ಷಿ ದಕ್ಷಿಣಾಮೂರ್ತಿ ಅವರಿಗೆ ಸಂದಿದೆ.
- **ಗೌರವ ಡಾಕ್ಟರೇಟ್ (೧೯.೧.೦೮):** ಪದವಿಯನ್ನು ಬೆಂಗಳೂರಿನ ವಿಶ್ವವಿದ್ಯಾಲಯವು ಕನ್ನಡದ ಹಿರಿಯಣ್ಣ ನಾಡೋಜ ಜಿ. ನಾರಾಯಣ ಅವರಿಗೆ ನೀಡಿ ಪುರಸ್ಕರಿಸಿದೆ.
- **ಯುವ ರಾಜಕಾರಣಿ ಪ್ರಶಸ್ತಿ (೧೯.೧.೦೮):** ಬಸವನಗುಡಿ ಕ್ಷೇತ್ರದ ಜನಪ್ರಿಯ ಶಾಸಕ ಶ್ರೀ ಕೆ. ಚಂದ್ರಶೇಖರ್ ಅವರು ಎಸ್ಸೆಲ್ ಸಮೂಹ ಮತ್ತು ಕನ್ನಡ 'ಜಿ'ವಾಹಿನಿ ನಡೆಸಿದ ಆಯ್ಕೆ ಪ್ರಕ್ರಿಯೆಯಲ್ಲಿ ಆಯ್ಕೆಗೊಂಡಿದ್ದಾರೆ.
- **ಅನುವಾದ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೨೦೦೭-೦೮):** ಪಂ. ಸುಧಾಕರ್ ಚತುರ್ವೇದಿ, ಶ್ರೀ ಗುರುಮೂರ್ತಿ ಪೆಂಡಕೂರ, ಡಾ. ಬಿ.ನಂ. ಚಂದ್ರಯ್ಯ, ಪ್ರೊ. ಬಸವರಾಜ ಪುರಾಣಿಕ, ಡಾ. ಸರಜೂಕಾಟ್ಕರ್ ಅವರಿಗೆ ಸಂದಿದೆ.
- **'ಪದ್ಮಶ್ರೀ ಪ್ರಶಸ್ತಿ' (೨೦೦೭) :** ಕೇಂದ್ರ ಸರ್ಕಾರ ಕನ್ನಡದ ಖ್ಯಾತ ಕವಿ, ನಾಡೋಜ, ಡಾ. ನಿಸಾರ್ ಅಹಮದ್ ಅವರಿಗೆ ಘೋಷಿಸಿದೆ.
- **ನಾಡೋಜ ಪ್ರಶಸ್ತಿ (೨೦೦೭):** ಹಂಪಿ ಕನ್ನಡ ವಿಶ್ವವಿದ್ಯಾಲಯವು ಡಾ. ಸಿದ್ದಲಿಂಗಯ್ಯ, ಶ್ರೀ ಶಾಂತರಸ, ಜಾನಪದ ಕಲಾವಿದೆ ಸುಕ್ರಿ ಬೊಮ್ಮಗೌಡ, ನ್ಯಾಯಮೂರ್ತಿ ಎಸ್.ಆರ್. ನಾಯಕ್ ಅವರಿಗೆ ನೀಡಿ ಗೌರವಿಸಿದೆ.
- **ಕಾಸರಗೋಡಿನ 'ಶರಾವತಿ ಸಾಂಸ್ಕೃತಿಕ ಪ್ರತಿಷ್ಠಾನದ ಪ್ರಶಸ್ತಿ':** ಡಾ. ಎಸ್.ವಿ. ಪ್ರಭಾವತಿಯವರ 'ಕನ್ನಡ ರಾಮಾಯಣಗಳು' ಎಂಬ ಸಂಶೋಧನಾ ಕೃತಿಗೆ ಹಾಗೂ 'ಭೂಮಿ' ಎಂಬ ಕವನ ಸಂಕಲನಕ್ಕೆ ದೊರೆತಿದೆ.

*ಮೇಲ್ಕಂಡ ಎಲ್ಲಾ ಸನ್ಮಾನ್ಯರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತದೆ.*

# ಶ್ರದ್ಧಾಂಜಲಿ

- **ಅಶ್ವಿನಿ (ಎಂ.ವಿ. ಕನಕಮ್ಮ)೭೪ :** ಜೀವಿತ ಕಾಲ (೧/೧೧/೧೯೩೩–೭/೧೧/೦೭) ಕನ್ನಡದ ಹಿರಿಯ ಕಾದಂಬರಿ ಕರ್ತೆ. ಇವರ 'ಬೆಸುಗೆ', 'ಕಪ್ಪು ಕೊಳ', ಚಲನಚಿತ್ರವಾಗಿ ಅಪಾರ ಮೆಚ್ಚುಗೆ ಗಳಿಸಿವೆ. ಇವರ ಇತರ ಜನಪ್ರಿಯ ಕಾದಂಬರಿಗಳು: ನಿಲುಕದನಕ್ಷತ್ರ, ಮೃಗತೃಷ್ಣಾ, ವಿಜೇತ, ಬಿಂದಿಯಾ, ಹುತ್ತದಸುತ್ತ, ಬಾಲ್ಯಸಖಿ; ಪ್ರೇಮದ ಸೋಪಾನ ಮುಂತಾದವು. 'ತುಪ್ಪದದೀಪ' (ಕಥಾಸಂಕಲನ)
- **ಪ್ರೇಮಾ ಕಾರಂತ :** ರಂಗಕರ್ಮಿ ಪ್ರೇಮಾ ಕಾರಂತರು ಬೆಂಗಳೂರಿನಲ್ಲಿ ೨೯/೧೦/೦೭ರಂದು ನಿಧನರಾದರು.
- **ಪುಂಡಲೀಕಪ್ಪ ಬಸವಗೌಡ ಧುತ್ತರಗಿ :** ಜೀವಿತಕಾಲ (೧೫/೬/೧೯೨೯–೧/೧೧/೦೭) ಖ್ಯಾತ ರಂಗಕರ್ಮಿ, ನಾಟಕಕಾರ ಹಾಗೂ ನಿರ್ದೇಶಕರಾಗಿದ್ದರು. ಇವರಿಗೆ ಗುಬ್ಬಿವೀರಣ್ಣ ಪ್ರಶಸ್ತಿ, ನಾಟಕ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಲಭಿಸಿವೆ. ಇವರು ೬೦ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ.
- **ಡಾ.ಎಂ.ಎಸ್.ಲಠ್ಠೆ :** ಜೀವಿತಕಾಲ (೧೨/೪/೧೯೩೨–೧೯/೧೧/೦೭) ಇವರು ಶ್ರೇಷ್ಠ ಜನಪದ ವಿದ್ವಾಂಸರು, ಗುಲ್ಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿವೃತ್ತ ಪ್ರಾಧ್ಯಾಪಕರು. ಇವರ ಕೃತಿಗಳ ಸಂಖ್ಯೆ ಸುಮಾರು ೬೦. ಇವುಗಳಲ್ಲಿ ಜನಪದ, ಕಾದಂಬರಿ, ಕವನ ಸಂಗ್ರಹ, ನಾಟಕ, ಪ್ರಬಂಧಗಳು ಸೇರಿವೆ ಹಲವು ಕೃತಿಗಳನ್ನು ಸಂಪಾದಿಸಿದ್ದಾರೆ.
- **ಪ್ರೊ. ಟಿ.ಶ್ರೀನಿವಾಸ ರಾಜು :** ಜೀವಿತಕಾಲ (೨೮/೧೧/೧೯೪೨–೨೮/೧೨/೦೭) ಬಹುಮುಖ ಪ್ರತಿಭೆಯ ಶ್ರೀನಿವಾಸರಾಜು ಜನಪ್ರಿಯ ಉಪನ್ಯಾಸಕ/ಪ್ರಾಧ್ಯಾಪಕರಾಗಿದ್ದುದಲ್ಲದೆ. ಸಾಹಿತ್ಯ ಕ್ಷೇತ್ರದಲ್ಲಿ ನಾಟಕ, ಕವನ, ಪ್ರಬಂಧ, ವಿಮರ್ಶೆ ಸಣ್ಣಕತೆ ಮುಂತಾದವನ್ನು ಸಂಪನ್ನಗೊಳಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, ರಾಜ್ಯೋತ್ಸವ ಪ್ರಶಸ್ತಿ; 'ಆರ್ಯಭಟ', 'ಸಂಸ', 'ಸಂದೇಶ', ಸರ್ ಎಂ. ವಿಶ್ವೇಶ್ವರಯ್ಯ ಪ್ರಶಸ್ತಿಗಳಿಗೂ ಭಾಜನರಾಗಿದ್ದಾಲೆ. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಕ್ರೈಸ್ಟ್ ಕಾಲೇಜಿನಲ್ಲಿ ಹಲವಾರು ಮೌಲಿಕ ಕೃತಿಗಳನ್ನು ಪ್ರಕಟಿಸಿ ಪ್ರಕಟಣೋದ್ಯಮದಲ್ಲಿ ಕ್ರಾಂತಿ ನಡೆಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ, ಕರ್ನಾಟಕ ನಾಟಕ ಅಕಾಡೆಮಿ ಸದಸ್ಯ, ಕೇಂದ್ರ ಸಾಹಿತ್ಯ ಅಕಾಡೆಮಿ ಕನ್ನಡ ಸಲಹಾ ಸಮಿತಿಯ ಸದಸ್ಯರಾಗಿಯೂ ಸೇವೆಸಲ್ಲಿಸಿದ್ದಾರೆ.
- **ಎಸ್.ಆರ್. ಬೊಮ್ಮಾಯಿ :** ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ಎಸ್.ಆರ್.ಬೊಮ್ಮಾಯಿ ಅವರು ೧೦/೧೦/೦೭ ರಂದು ಬೆಂಗಳೂರಿನಲ್ಲಿ ನಿಧನರಾದರು. ಕೆಲಕಾಲ ಇವರು ಕೇಂದ್ರ ಸರ್ಕಾರದಲ್ಲಿ ಮಾನವಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಮಂತ್ರಿಯಾಗಿದ್ದರು. ಅವರ ಜೀವಿತಕಾಲ : ೬/೬/೧೯೨೪–೧೦/೧೦/೦೭.
- **ವ್ಯಾಸರಾಯ ಬಲ್ಲಾಳ :** ಜೀವಿತಕಾಲ ೧.೧೨.೧೯೨೩ ರಿಂದ ೩೦.೧.೨೦೦೮. ಖ್ಯಾತ ಕಾದಂಬರಿಕಾರರು. ಕೆಲಕಾಲ 'ನುಡಿ' ಪತ್ರಿಕೆಯ ಸಂಪಾದಕರಾಗಿ ಹಾಗೂ ಅನೇಕ ಪತ್ರಿಕೆಗಳಿಗೆ ಅಂಕಣಕಾರರಾಗಿ ಪತ್ರಿಕೋದ್ಯಮಕ್ಕೆ ಅನನ್ಯ ಸೇವೆ ಸಲ್ಲಿಸಿರುತ್ತಾರೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯ ಸಾಹಿತ್ಯ ಪ್ರಶಸ್ತಿ, ಅನಕೃ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಖ್ಯಾತ ಕೃತಿಗಳು: ಹೇಮಂತಗಾನ, ವಾತ್ಸಲ್ಯಪಥ, ಉತ್ತರಾಯಣ, ಬಂಡಾಯ, ಅನುರಕ್ತೆ, ಹೆಜ್ಜೆ, (ಕಾದಂಬರಿಗಳು) ಕಾಡು ಮಲ್ಲಿಗೆ (ಕಥಾಸಂಕಲನ), ಖುರ್ಶಿದ್ ನರಮನ್ (ಕಿಶೋರ ಸಾಹಿತ್ಯ), ಗಿಳಿಯ ಪಂಜರದೊಳಿಲ್ಲ, ಮುಳ್ಳಲ್ಲಿದೆ ಮಂದಾರ (ನಾಟಕಗಳು), ನಾನೊಬ್ಬ ಭಾರತೀಯ ಪ್ರವಾಸಿ (ಪ್ರವಾಸಕಥನ), ರಾಜ್ಯ ಪ್ರಶಸ್ತಿ ಪುರಸ್ಕೃತರು (೨೦೦೪).
- ೨೦.೧೨.೨೦೦೭ ರಂದು ಖ್ಯಾತ **ಗಮಕಿ ಆರ್. ಶಂಕರ್‌ನಾರಾಯಣ್** ಅವರು ನಿಧನರಾದರು.
- **ಪ್ರೊ. ಎಸ್.ಕೆ. ಲಕ್ಷ್ಮಣರಾವ್** (ದತ್ತಿ ದಾನಿಗಳು) ೮೨ ವರ್ಷ. ಜೀವಿತ ಕಾಲ: ೯.೮.೧೯೨೫ -೨೪.೧೧.೨೦೦೭ ಇಂಜಿನಿಯರ್ ಆಗಿದ್ದ ಶ್ರೀಯುತರು ತಮ್ಮ ದೇಹವನ್ನು ಸೆಂಟ್‌ಜಾನ್ ಮೆಡಿಕಲ್ ಕಾಲೇಜಿಗೆ ದಾನ ಮಾಡಲು ತಿಳಿಸಿರುತ್ತಾರೆ.

***ಮೇಲ್ಕಂಡ ಎಲ್ಲಾ ದಿವಂಗತರುಗಳಿಗೆ***
***ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಗೌರವಪೂರ್ವಕವಾಗಿ***
***ಶ್ರದ್ಧಾಂಜಲಿಯನ್ನು ಅರ್ಪಿಸುತ್ತಿದೆ.***

## ಪ್ರತಿಷ್ಠಾನಕ್ಕೆ ದಿನಾಂಕ ೧೮.೧೦.೨೦೦೭ ರಿಂದ ಬಂದ ದಾನಗಳ ವಿವರ

| | | |
|---|---|---|
| ೧ | ಪ್ರೊ. ನಾ. ಗೀತಾಚಾರ್ಯ | ೨೦೦–೦೦ |
| ೨ | ಶ್ರೀ ಎಸ್. ಟಿ. ರಾಧಾಕೃಷ್ಣ | ೩೦೦–೦೦ |
| ೩ | ಶ್ರೀ ಎಚ್.ಆರ್. ಬಾಪು ಸತ್ಯನಾರಾಯಣ | ೫೦೦–೦೦ |
| ೪ | ಎಂ.ವಿ.ಸೀ. ಶತಮಾನೋತ್ಸವ ಕಾರ್ಯಕ್ರಮಕ್ಕೆ ಶ್ರೀ ಎಸ್.ಟಿ. ರಾಧಾಕೃಷ್ಣ ಅವರು | ೨೦೦–೦೦ |

ರೂಪಾಯಿಗಳನ್ನು ದಾನವಾಗಿ ನೀಡಿದ್ದಾರೆ.

## ಗ್ರಂಥದಾನ ಮಾಡಿರುವ ಬಗ್ಗೆ ಪಟ್ಟಿ

| | | |
|---|---|---|
| ೧ | ಶ್ರೀ ನಾ. ಗೀತಾಚಾರ್ಯ, ಬೆಂಗಳೂರು- | ೨೩ ಪುಸ್ತಕಗಳು |
| ೨ | ಶ್ರೀಮತಿ ವಿಜಯಲಕ್ಷ್ಮಿ | ೬೭ |
| ೩ | ಡಾ. ಎಂ. ಚಿದಾನಂದಮೂರ್ತಿ | ೩ |
| ೪ | ಡಾ. ಕೆ.ಪಿ. ಭಟ್ (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಭಾಷೆ) | ೧ |



# ಗ್ರಂಥ ಸ್ವೀಕಾರ

೧. **ಮೌನ ಕಡಲು** : (ಕವನಸಂಕಲನ) ಲೇಖಕರು ಆರ್. ಶಾಂತ ಕಂಪಾರಹಳ್ಳಿ ಪ್ರಕಾಶಕರು: ಗೌತಮ್ ಪಬ್ಲಿಕೇಷನ್ಸ್, ಸಂಜೀವಿನಿ, ಕದ್ರಿ ಕಂಬ್ಲಾ ಕ್ರಾಸ್ ನ್ಯೂ ರೋಡ್. ಕದ್ರಿ ಮಂಗಳೂರು. ಪ್ರಸಟಣೆ :೨೦೦೭ ಪುಟಗಳು ೧೨೩. ಬೆಲೆ ೫೦/-

೨. **ಶ್ರೀ ವೈಷ್ಣವ ಹರಿದಾಸ ಸಾಹಿತ್ಯ** (ದಾಸ ಸಾಹಿತಿಗಳು) : ಲೇಖಕರು: ಪ್ರೊ. ನಾ.ಗೀತಾಚಾರ್ಯ. ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು. ಚಾಮರಾಜಪೇಟೆ. ಬೆಂಗಳೂರು- ೧೮. ಪುಟಗಳು : viii+226. ಪ್ರಕಟಣೆ : ೨೦೦೭. ಬೆಲೆ ರೂ ೫೫/-

೩. **ಕನಕದಾಸ ಮತ್ತು ಏಕನಾಥ- ಒಂದು ತೌಲನಿಕ ಅಧ್ಯಯನ** : ಲೇಖಕರು : ಮೇಧಾ ಎಂ.ಕುಲಕರ್ಣಿ. ಪ್ರಕಾಶಕರು :ಅಭಿಜಿತ್ ಪ್ರಕಾಶನ. A/೪೦೪ ವಿನಾಯಕ ಆಶಿಷ್ ಪಿ. ಅಂಡ್ ಟಿ. ಕಾಲನಿ ಹತ್ತಿರ. ಎಂ.ಎಂ.ಎಂ.ರಸ್ತೆ ಮುಳುಂದ (ಪ). ಪ್ರಕಟಣೆ ೨೦೦೭. ಮುಂಬಾಯಿ-೪೦೦೦೮೦. ಪುಟಗಳು : xii+134. ಬೆಲೆ ರೂ ೧೦೦/-

೪. **ಸಿರಿಗನ್ನಡ ಸರಳ ಭಗವದ್ಗೀತೆ** : ಲೇಖಕರು : ಎಸ್. ಬಿಳಿಗಿರಿವಾಸನ್. ಪ್ರಕಾಶಕರು 'ಸಿಂಚನ' ಕನ್ನಡ ವೇದಿಕೆ. ಆರ್.ವಿ.ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಎಸ್. ಎಸ್.ಎಂ. ಆರ್.ವಿ.ಕಾಲೇಜು ಆವರಣ, ೩೬ನೇ ಅಡ್ಡರಸ್ತೆ, ೨೬ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್. ಜಯನಗರ. ಬೆಂಗಳೂರು-೫೬೦೦೪೧. ಪುಟಗಳು ೧೩೪+x ಬೆಲೆ: ೭೫/- ಪ್ರಕಟಣೆ: ೨೦೦೭

೫. **ಕನ್ನಡ ಕೈದೀವಿಗೆ** : ಲೇಖಕರು : ರಾ.ನಂ.ಚಂದ್ರಶೇಖರ. ಪ್ರಕಾಶಕರು. ಕನ್ನಡ ಗೆಳೆಯರ ಬಳಗ. ನಂ.೬. ರಾಘವೇಂದ್ರ ಕಾಂ[illegible]ಕ್, ೨ನೇ ತಿರುವು. ಸಿ.ಕೆ.ಸಿ. ಗಾರ್ಡನ್. ಪ್ರಕಟಣೆ ೨೦೦೬. ಬೆಂಗಳೂರು-೫೬೦೦೨೭. ಬೆಲೆ:೧೦/-

೬. **ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು** : ಲೇಖಕರು : ಎ.ಆರ್.ಗುರು. ಪ್ರಕಾಶಕರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ. ೩ನೇ ಮುಖ್ಯರಸ್ತೆ. ನರಸಿಂಹರಾಜ ಕಾಲೋನಿ. ಬೆಂಗಳೂರು-೧೯. ಪುಟಗಳು.xx+೧೬೦. ಪ್ರಕಟಣೆ ೨೦೦೬. ಬೆಲೆ ರೂ ೧೦೦/-

೭. **ಶ್ರೀ ಲಲಿತಾ ತ್ರಿಶತೀ ವೈಭವ** (ಭಾವಾರ್ಥ - ವಿಶೇಷಾರ್ಥ-ವಿಶ್ಲೇಷಣೆಗಳೊಂದಿಗೆ) : ಲೇಖಕರು : ಕೆ. ಶ್ರೀನಿವಾಸ ಶಾಸ್ತ್ರೀ. ಪ್ರಕಾಶಕರು: ಅಕ್ಷಯ ಪ್ರಕಾಶನ. ೨೨೯ ೩ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಹನುಮಂತನಗರ. ಬೆಂ-೧೯. ಪುಟಗಳು. ೧೨೮. ಪ್ರಕಟಣೆ ೨೦೦೬. ಬೆಲೆ ರೂ ೯೫/-

೮. **ಕಲಿಯುಗದ ಮಾನವರು** (ಸಚಿತ್ರ) : ಲೇಖಕರು. ಶ್ರೀ. ಶ್ರೀರವಿ. ಪ್ರಕಾಶಕರು. ಸುಮಿತಿ ಪ್ರಕಾಶನ. ನಂಜಾಂಬ ಅಗ್ರಹಾರ. ಚಾಮರಾಜಪೇಟೆ. ಬೆಂಗಳೂರು. ಪುಟಗಳು ೫೬. ಪ್ರಕಟನೆ.೨೦೦೭. ಬೆಲೆ ರೂ ೨೦/-

೯. **ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ** : ಲೇಖಕರು . ಜಿ.ವಿ.ಶ್ರೀನಿವಾಸ ಶಾಸ್ತ್ರೀ ಮತ್ತು ಇತರರು. ಪ್ರಕಾಶಕರು : ನವಕರ್ನಾಟಕ ಪ್ರಕಾಶನ. ಎಂಬೆಸಿಸೆಂಟರ್. ಕ್ರೆಸೆಂಟ್ ರಸ್ತೆ ಬೆಂ-೧. ಪುಟಗಳು೮೦. ಬೆಲೆ:೨೫/- ಪ್ರಕಟಣೆ ೨೦೦೬

೧೦. **ನೆನಪಿನ ಅಂಗಳದಲ್ಲಿ ಡಾ.ರಾಜ್** : ಸಂಪಾದಕ : ಗೌರಿಸುಂದರ್. ಚಿತ್ರಶ್ರೀ ೪೩ ಕಲಾಮಂದಿರ ೫ನೇ ತಿರುವು. ಅ.ನ.ಸುಬ್ಬರಾವ್ ರಸ್ತೆ ಹನುಮಂತನಗರ ಬೆಂ.೧೯. ಪುಟಗಳು:೧೬೮. ಪ್ರಕಾಶನ.೨೦೦೭ ಬೆಲೆ ೮೫/-, ಪ್ರಕಾಶಕರು: ಸುಂದರ ಪ್ರಕಾಶನ.

---

ತೆರದ ಅಂಚೆ (ಅಚ್ಚಾದ ಪುಸ್ತಕ/ಸಾಮಗ್ರಿ)

BOOK-POST (Pr nted Book Matter)

ತೆರೆದ-ಅಂಚೆ



ಶ್ರೀಮತಿ/ಶ್ರೀ...........................................

...........................................

...........................................

ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**

ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ

ನರಸಿಂಹರಾಜ ಕಾಲೋನಿ

ಬೆಂಗಳೂರು - ೧೯

ದೂರವಾಣಿ : ೨೬೬೧೫೮೭೭

ಮುದ್ರಕರು : ಇಳಾ ಮುದ್ರಾ, ನಂ. ೩೬. ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೨೬. ✆ : ೨೬೭೫೭೧೫೯